ಕಾಯಕವೇ ಕೈಲಾಸ



# ಸಿದ್ಧಗಂಗಾ



ಪರಿಸರ ರಕ್ಷಣೆ
ನಮ್ಮೆಲ್ಲರ ಹೊಣೆ

ಸಂಪುಟ : ೫೫ ಜೂನ್ ೨೦೧೯ ಸಂಚಿಕೆ : ೦೬

ಬೆಂಗಳೂರು ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿ ಪುರದಪಾಳ್ಯದಲ್ಲಿ ಏರ್ಪಡಿಸಿದ್ದ ಶ್ರೀ ಬಸವೇಶ್ವರಸ್ವಾಮಿ ಪುನರ್ ಪ್ರತಿಷ್ಠಾಪನೆ ಹಾಗೂ ನಂದಿ ಗೋಶಾಲಾ ಲೋಕಾರ್ಪಣೆ ಸಮಾರಂಭವನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಹಾಗೂ ಹರಗುರು ಚರಮೂರ್ತಿಗಳ ದಿವ್ಯಉಪಸ್ಥಿತಿಯಲ್ಲಿ ಶ್ರೀಮತಿ ಶೈಲಜಾ ಸೋಮಣ್ಣನವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು.



**ಶ್ರೀ ನರೇಂದ್ರ ಮೋದಿಯವರು**
ಭಾರತದ ನೂತನ ಪ್ರಧಾನಮಂತ್ರಿಗಳು





**ಶ್ರೀ ಜಿ.ಎಸ್. ಬಸವರಾಜುರವರು**
ತುಮಕೂರು ಲೋಕಸಭಾ ನೂತನ ಸಂಸದರು




ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಉಪಾಧ್ಯಕ್ಷರು

ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ಆರ್.ಎಸ್. ಮಲ್ಲೇಶಪ್ಪ
ಕೆ.ಬಿ. ಶಿವಶಂಕರಯ್ಯ

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.

ಮುದ್ರಕರು :
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್
ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ,
ತುಮಕೂರು-೫೭೨ ೧೦೪.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೩೨೨.

## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೫೫ ಜೂನ್ ೨೦೧೯ ಸಂಚಿಕೆ : ೦೬

## ಒಳಪುಟಗಳಲ್ಲಿ ...............



ಚಂದಾ ವಿವರ : ವಾರ್ಷಿಕ ಚಂದಾ ರೂ. 200/–
ಆಜೀವ ಸದಸ್ಯತ್ವ ರೂ. 1500/– ಬಿಡಿ ಪ್ರತಿ ರೂ. 20.00

# ಸಂಪಾದಕೀಯ........

**"ನಿಮ್ಮಗಳ ಮಂಡೆಗೆ ಹೂವ ತರುವೆನಲ್ಲದೆ ಹುಲ್ಲತಾರೆನು"** ಎಂಬುದಾಗಿ ನೂತನವಾಗಿ ಪಟ್ಟಾಧಿಕಾರವನ್ನು ವಹಿಸಿಕೊಂಡ ಪೂಜ್ಯ ಶ್ರೀ ಶಿವಲಿಂಗಸ್ವಾಮಿಗಳು ನುಡಿದರು. ಟಿ.ನರಸೀಪುರ ತಾಲ್ಲೂಕಿನ ಮೇದಿನಿ ಮಠದಲ್ಲಿ ದಿನಾಂಕ ೨೭.೫.೨೦೧೮ ರಂದು ಆಯೋಜಿತಗೊಂಡಿದ್ದ ನೂತನ ಪಟ್ಟಾಧಿಕಾರ ಮಹೋತ್ಸವ ಹಾಗೂ ಪರಮಪೂಜ್ಯ ಕರ್ನಾಟಕ ರತ್ನ, ಪದ್ಮಭೂಷಣ, ರಾಷ್ಟ್ರೀಯ ಬಸವ ಪ್ರಶಸ್ತಿ ಪುರಸ್ಕೃತ, ತ್ರಿವಿಧ ದಾಸೋಹಮೂರ್ತಿ ಪರಮಪೂಜ್ಯ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ೧೧೧ನೇ ಪುಣ್ಯಸ್ಮರಣೆ ಸಮಾರಂಭ ಭವ್ಯವಾಗಿ ನಡೆದದ್ದು ಅಭಿನಂದನೀಯ.

ಸಮಾರಂಭದಲ್ಲಿ ಪರಮಪೂಜ್ಯ ಜಗದ್ಗುರು ಶ್ರೀ ಶ್ರೀ ಶಿವರಾತ್ರಿದೇಶೀಕೇಂದ್ರಮಹಾಸ್ವಾಮಿಗಳು, ಶ್ರೀಮದ್ ಸುತ್ತೂರು ವೀರಸಿಂಹಾಸನ ಮಹಾಸಂಸ್ಥಾನಮಠ ಮೈಸೂರು, ಪರಮಪೂಜ್ಯ ಶ್ರೀ.ಮ.ನಿ.ಪ್ರ. ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಅಧ್ಯಕ್ಷರು, ಸಿದ್ಧಗಂಗಾಮಠ ತುಮಕೂರು. ಪರಮಪೂಜ್ಯ ಶ್ರೀ ಮ.ನಿ.ಪ್ರ.ಸ್ವ ಡಾ॥ ಮುಮ್ಮಡಿ ನಿರ್ವಾಣಮಹಾಸ್ವಾಮಿಗಳು ಅಧ್ಯಕ್ಷರು, ಕನಕಪುರ. ಶಿವಾನುಭವಚರಮೂರ್ತಿ ಪರಮಪೂಜ್ಯ ಶ್ರೀ ಶ್ರೀ ಶಿವರುದ್ರಮಹಾಸ್ವಾಮಿಗಳು, ಬೇಲಿಮಠ ಬೆಂಗಳೂರು. ಶ್ರೀ ದೇಗುಲ ಮಠ, ಶಾಸಕರು, ಟಿ.ನರಸೀಪುರ, ವಿದ್ವಾನ್ ಡಾ॥ ಎಂ.ಶಿವಕುಮಾರಸ್ವಾಮಿಯವರು ನಿರ್ದೇಶಕರು ನಿವೃತ್ತ, ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು. ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಶಿವಾಚಾರ್ಯಸ್ವಾಮಿಗಳು, ಸೂರ್ಯ ಸಿಂಹಾಸನ ಮಠ-ವಾಟಾಳು, ಪೂಜ್ಯ ಶ್ರೀ ಚಿದಾನಂದ ಸ್ವಾಮಿಗಳು ಹೊಸಮಠ-ಮೈಸೂರು ಭಾಗವಹಿಸಿ ಸಮಾರಂಭಕ್ಕೆ ಯಶಸ್ಸಿನ ಶಿವಲಿಂಗ ಪುಷ್ಪವನ್ನು ಮುಡಿಸಿದರು. ಪೂಜ್ಯ ಶ್ರೀ ಸಿದ್ಧಲಿಂಗಸ್ವಾಮಿಗಳು ಮೇದಿನಿ ಶ್ರೀಗಳವರು ತಮ್ಮ ಗುರುಗಳಾದ ಪೂಜ್ಯ ಶ್ರೀ ಶಿವಕುಮಾರಸ್ವಾಮಿಗಳಿಗೆ ಮಾಡಿದ ಸೇವೆಯನ್ನು ಸ್ಮರಿಸಿದರು.

ಮಧ್ಯಾಹ್ನ ಆಯೋಜಿತವಾಗಿದ್ದ ಪರಮಪೂಜ್ಯ ಲಿಂಗೈಕ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ಸಂಸ್ಮರಣೋತ್ಸವ ಹಾಗೂ ಧಾರ್ಮಿಕ ಸಮಾರಂಭದಲ್ಲಿ ಪರಮಪೂಜ್ಯ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶೀಕೇಂದ್ರ ಮಹಾಸ್ವಾಮಿಗಳು, ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳು, ಪರಮಪೂಜ್ಯ ಶ್ರೀ ಶ್ರೀ ಚನ್ನಬಸವಸ್ವಾಮಿಗಳು ಶ್ರೀ ದೇಗುಲಮಠ-ಕನಕಪುರ, ಷ.ಬ್ರ.ಡಾ॥ ಶ್ರೀ ಶ್ರೀ ಶಿವಾನಂದ ಶಿವಾಚಾರ್ಯಮಹಾಸ್ವಾಮಿಗಳು, ಅಧ್ಯಕ್ಷರು ಹಿರೇಮಠ, ತುಮಕೂರು, ಪೂಜ್ಯ ಶ್ರೀ ಶ್ರೀ ಮಹಾಂತಸ್ವಾಮಿಗಳು-ಗುರುಮಲ್ಲೇಶ್ವರಸಂಸ್ಥಾನ ಮಠ, ದೇವನೂರು, ಪೂಜ್ಯ ಶ್ರೀ ಶ್ರೀ ಚಂದ್ರಶೇಖರ ಮಹಾಸ್ವಾಮಿಗಳು ಅಧ್ಯಕ್ಷರು, ಬೆಟ್ಟದಹಳ್ಳಿ ಶ್ರೀ ಗವಿಮಠ, ಮಾಜಿ ಸಚಿವರಾದ ಮಾನ್ಯ ಶ್ರೀ ಎಂ.ನರೇಂದ್ರಸ್ವಾಮಿಯವರು, ಮಾನ್ಯ ಶ್ರೀ ಬಿ.ವೈ.ವಿಜಯೇಂದ್ರರವರು, ಪ್ರಧಾನ ಕಾರ್ಯದರ್ಶಿಗಳು ಬಿ.ಜೆ.ಪಿ. ರಾಜ್ಯ ಯುವಮೋರ್ಚಾ, ವಿದ್ವಾನ್ ಡಾ.ಎಂ.ಶಿವಕುಮಾರಸ್ವಾಮಿ, ಶ್ರೀ ಹೆಚ್.ವಿ.ವೀರಭದ್ರಯ್ಯ, ಸಂಪಾದಕರು ಸಿದ್ಧಗಂಗಾ ಮಾಸಪತ್ರಿಕೆ, ಭಾಗವಹಿಸಿ ಸಮಾರಂಭದ ಯಶಸ್ಸಿಗೆ ಕಾರಣರಾದರು.

ಸಮಾರಂಭದಲ್ಲಿ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ಬೃಹತ್ ಭಾವಚಿತ್ರವನ್ನು ಅನಾವರಣ ಮಾಡಲಾಯಿತು. ಶ್ರೀ ಹೆಚ್.ವಿ.ವಿ.ಯವರು ಮಾತನಾಡುತ್ತಾ 'ಅನಾವರಣವಾಯಿತಂತೆ ಗಾಂಧೀಜಿಯ ಚಿತ್ರಕೆ ಅನಾವರಣವಾದ ಮೇಲೆ ಸಿದ್ಧವಾಯಿತು ಶಿಕ್ಷೆಗೆ' ಎಂಬ ರಾಷ್ಟ್ರಕವಿ ಡಾ॥ ಜಿ.ಎಸ್.ಶಿವರುದ್ರಪ್ಪನವರ ಕವಿತೆಯ ಸಾಲುಗಳನ್ನು ಉದಾಹರಿಸುತ್ತಾ ಪರಮಪೂಜ್ಯ ಮಹಾಸ್ವಾಮಿಗಳವರ ವ್ಯೋಮ ಸದೃಶ ವ್ಯಕ್ತಿತ್ವವನ್ನು 'ಕಾವಿಯುಡುಗೆಯನುಟ್ಟನಭವೇ ಕಿರಣ ಹಸ್ತವ ಚಾಚಿದೆ. ಎಲ್ಲ ನನ್ನವರೆನ್ನುವ ಭಾವದ ಕರುಣೆಯು ಕಣ್ತೆರೆಸಿದೆ' ಎಂಬ ಕವಿ ಶಿವರುದ್ರಪ್ಪನವರ ಭಕ್ತಿನುಡಿಗಳನ್ನು ಉದ್ಗರಿಸಿದರು. ವಿದ್ವಾನ್ ಡಾ॥ ಶಿವಕುಮಾರಸ್ವಾಮಿಯವರು ಶ್ರೀ ಮಠದಲ್ಲಿ ತಾವಿದ್ದ ದಿನಗಳನ್ನು ಸ್ಮರಿಸುತ್ತಾ, ಪೂಜ್ಯ ಶ್ರೀಗಳವರ ಪ್ರೀತಿಗೆ ಪಾತ್ರರಾದುದನ್ನು ನೆನಪಿಸಿಕೊಂಡರು.

ಪೂಜ್ಯ ಶ್ರೀ ಮೇದಿನಿಸ್ವಾಮಿಗಳು ಶ್ರೀ ಸಿದ್ಧಗಂಗಾ ಶಿವಕುಮಾರ ಮಹಾಸ್ವಾಮಿಗಳವರ ಆಪ್ತರಾಗಿ ಅವರ ಶಿವಚರಣ ಭಕ್ತಿಕುಸುಮವಾಗಿ ಸೇವೆಗೈದ ಪುಣ್ಯವಂತರು. ಸಮಾರಂಭ ವಿವಿಧ ಮಠಾಧೀಶರುಗಳಿಂದ ತುಂಬಿ ಭಕ್ತಾದಿಗಳ ಮನಸ್ಸಿಗೆ ಆನಂದವನ್ನು ತಂದಿತು.

ತುಮಕೂರಿನ ದಿಕ್ಸೂಚಿ ಮಾಸಪತ್ರಿಕೆಯ ಬಂಧು ಸನ್ಮಾನ್ಯ ಶ್ರೀ ಹಿ.ಮ. ನಾಗಣ್ಣನವರು ಹಾಗೂ ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀ ಗಂಗಾಧರ ಅವರ ಕಾರ್ಯಕ್ರಮ ನಿರೂಪಣೆ ಅಚ್ಚುಕಟ್ಟಾಗಿ ಮೂಡಿಬಂದಿತು. ಭಕ್ತಾದಿಗಳಿಗೆಲ್ಲಾ ದಾಸೋಹ ವ್ಯವಸ್ಥೆಯನ್ನು ಮಾಡಲಾಗಿತ್ತು. ಶ್ರೀ ಸಿದ್ಧಗಂಗಾ ಮಠದಿಂದ ಬಸ್ಸಿನ ವ್ಯವಸ್ಥೆ, ಶ್ರೀಗಳವರ ಕಾರು, ಮತ್ತೊಂದು ಬೆಂಗಳೂರು ಗೌರಮ್ಮ ಹಾಸ್ಟೆಲಿನ ಮ್ಯಾನೇಜರ್ ಶ್ರೀ ಕೆ.ಸಿ. ಬಸಪ್ಪನವರ ಮತ್ತು ಹೆಚ್.ವಿ.ವಿ.ಯವರ ಕಾರುಗಳು ಜೊತೆಗೂಡಿದ್ದವು. ಮಾಧ್ಯಮದ ಬಂಧುಗಳು ಸಹಕರಿಸಿದ್ದರು. ಕಿನಹಳ್ಳಿ ಶ್ರೀ ಮಲ್ಲಿಕಾರ್ಜುನ್, ಶ್ರೀ ಪ್ರಭುದೇವ್, ಶ್ರೀ ಬಸವರಾಜು, ಶ್ರೀ ಗಂಗಾಧರ್ ಮತ್ತು ಸಿದ್ಧಗಂಗಾಮಠದ ಅನೇಕ ಭಕ್ತಾದಿಗಳು ಸಮಾರಂಭದಲ್ಲಿ ಸೇವಾಶೀಲರಾಗಿ ಪಾಲ್ಗೊಂಡರು.

ಮೇದಿನಿಯ ಶ್ರೀಗುರುವ ಶಿವಲಿಂಗ ಜ್ಯೋತಿಯ
ಶಿವಭಾವಸಿರಿ ಗುರುವ ಸ್ಮರಿಸುವೆ । ನನ್ನ ತಂದೆ
ಸಿದ್ಧಗಂಗಾ ಗುರುವೇ ಕೃಪೆಯಾಗು

* * *

**ಪ್ರೊ. ಹೆಚ್.ವಿ. ವೀರಭದ್ರಯ್ಯ**
ಸಂಪಾದಕರು



# ಶ್ರೀವಾಣಿ

ನಾಡನ್ನು ಕಟ್ಟಬಲ್ಲ ಶಕ್ತಿ ಯಾವುದು? ಜ್ಞಾನವೇ, ವೈರಾಗ್ಯವೇ, ಭಕ್ತಿಯೇ, ಪರಾಕ್ರಮವೇ, ಧನವೇ? ತಕ್ಕ ಮಟ್ಟಿಗೆ ಇವೆಲ್ಲ ನಾಡಿನ ಪ್ರಗತಿಯ ದ್ಯೋತಕಗಳಾಗಿರುತ್ತವೆ. ಆದರೆ ಇವೆಲ್ಲದರ ಜೀವದ್ರವ್ಯ ಯಾವುದು? ಜ್ಞಾನ, ಶಕ್ತಿ, ವೈರಾಗ್ಯ, ಪರಾಕ್ರಮ, ಧನವನ್ನು ನಿರ್ಮಿಸುವ ಮಹಾಶಕ್ತಿ ಮಾನವತೆ. ಅದರ ಪ್ರತಿಪಾದನೆಗಾಗಿ ಸಾಹಿತ್ಯ, ಸಾಹಿತ್ಯದ ಅಂತರಂಗ ನಿರ್ಮಲ ಗಂಗೆ. ಬಹಿರಂಗ ಕಲ್ಪತರು. ಮರ್ತ್ಯಲೋಕದವರ ಮನದ ಮೈಲಿಗೆ ಕಳೆಯಲೆಂದು, 'ಶಬ್ದ ಸೋಪಾನವ' ಕಟ್ಟಿದರು ಕನ್ನಡ ಸಾಹಿತ್ಯ ತಪಸ್ವಿಗಳು. 'ಮಾನವ ಧರ್ಮವೊಂದೆ ಎಲ್ಲ' ಎಂದು ಜೀವನ ಧ್ಯೇಯವನ್ನು ಕಂಡುಕೊಂಡವರು. ಕಸವರನೆಂಬುದು। ನೆರೆ ಸೈರಿಸಲಾರ್ಪೊಡೆ ಪರವಿ ಚಾರಮಂ ಧರ್ಮಮುಮಂಪರ' ಎಂಬ ಹೃದಯವಂತಿಕೆಯನ್ನು ಮೆರೆದವರು. ದೃಷ್ಟಿ ವೈಶಾಲ್ಯತೆಯನ್ನು ಬೆಳೆಸಿಕೊಂಡ ಜೀವನ ಯೋಗಿಗಳು. ಅವರು ಬರೆದುದು ಜನ ಬದುಕಬೇಕೆಂದು! ಸಾಹಿತ್ಯದ ಪರಮ ಉದ್ದೇಶವೇ ಅದು.

ಒಂದು ನಾಡಿನ ಹಿರಿಮೆಗೆ ರಾಜಕಾರಣಿಗಳ ಕರ್ಮಶೀಲತೆ ಹೇಗೆ ಅವಶ್ಯವೋ ಹಾಗೆ ತಪಸ್ವಿಗಳ, ಜ್ಞಾನಿಗಳ, ಕವಿಗಳ, ಚಿಂತಕರ, ಅನುಭಾವಿಗಳ ಧ್ಯಾನವೂ ಬೇಕು. ಕನ್ನಡ ನಾಡು ಒಂದಾಗುವುದಕ್ಕೆ ಕನ್ನಡ ಸಾಹಿತಿಗಳ ಕಾಣಿಕೆ ಅಪಾರವಾದುದೆಂಬುದನ್ನು ಮರೆಯುವಂತಿಲ್ಲ. ಕನ್ನಡಕ್ಕಾಗಿ ದುಡಿಯುವವರು ಬರಿಯ ಕನ್ನಡಕ್ಕಾಗಿ ದುಡಿಯುವುದಿಲ್ಲ. ಭರತ ವರ್ಷಕ್ಕಾಗಿ ದುಡಿಯುತ್ತಾರೆ. ಲೋಕಕ್ಕಾಗಿ ದುಡಿಯುತ್ತಾರೆ. ಧರ್ಮಕ್ಕಾಗಿ ದುಡಿಯುತ್ತಾರೆ.

ಕನ್ನಡದಲ್ಲಿ ರಸಸಾಹಿತ್ಯ ಬೆಳೆದಿರುವಂತೆಯೆ ವಿಚಾರ, ವಿಜ್ಞಾನ, ಸಂಶೋಧನಾತ್ಮಕ ಸಾಹಿತ್ಯವೂ ಬಂದಿದೆ. ಆದರೆ ಅದನ್ನು ಬೆಳೆಸಬೇಕು. ಎಲ್ಲಾ ವಿಷಯಗಳಲ್ಲಿಯೂ ನಮ್ಮ ಹೃದಯವನ್ನು ತೆರೆದು ಎಷ್ಟೆಷ್ಟು ಸಂಸ್ಕೃತಿಗಳಿಗೆ, ಭಾಷೆಗಳಿಗೆ, ಜನಗಳಿಗೆ ತೆರೆಯುತ್ತೇವೆಯೋ ಅದನ್ನು ನಿಕಟವಾಗಿ ನೋಡುವುದಕ್ಕೆ ಹೋಗುತ್ತೇವೆಯೋ, ಅಷ್ಟಷ್ಟು ನಮ್ಮ ಹೃದಯ ವಿಕಾಸಗೊಳ್ಳುತ್ತಾ ಹೋಗುತ್ತದೆ. ಸಾಹಿತ್ಯ ಸಂಸ್ಕಾರದಿಂದ ಮನಸ್ಸಿನ ವೈಶಾಲ್ಯದಿಂದ ಎತ್ತರವಾಗುತ್ತದೆ.

ಕನ್ನಡ ಸಾಹಿತ್ಯದಲ್ಲಿ ಬಂದಿರುವ ಕಾವ್ಯಕೃತಿಗಳು ನಮ್ಮ ಅಮೂಲ್ಯ ಆಸ್ತಿ ಎಂಬ ಅಭಿಮಾನ ನಮ್ಮದಾದಬೇಕು. ನಮ್ಮ ನಾಡು ಬರೀ ಗಡಿಯಿಂದ ದೊಡ್ಡದಾಗುವುದಿಲ್ಲ. ನಮ್ಮ ಹೃದಯ ಮತ್ತು ಬುದ್ಧಿಶಕ್ತಿಯಿಂದ ದೊಡ್ಡದಾಗುತ್ತದೆ.

# ವಚನ-ತ್ರಿವಿಧಿ

## ಶ್ರೀ ಸಿದ್ಧಲಿಂಗೇಶ್ವರ ವಚನ



ಭಾವ ಮನಕ್ಕೆ ಲಿಂಗವ ಧರಿಸಿ
ಕಾಯಕ್ಕೆ ಲಿಂಗವಿಲ್ಲದಿರಬಹುದೆ?
ಎರಡಂಗ ಭಕ್ತರಾಗಿ ಒಂದಂಗ ಭವಿಯಾಗಿರ್ಪ
ಭ್ರಾಂತರ ಮುಖವ ನೋಡಲಾಗದು
ತನುಮನ ಭಾವದಲ್ಲಿ ಲಿಂಗವ ಧರಿಸಿ
ಲಿಂಗತ್ರಯಕ್ಕೆ ಅಂಗತ್ರಯಕ್ಕೆ ಅಗಲಿಕೆಯಿಲ್ಲದೆ
ಅಚಲಿತನಾಗಿರ್ದೆನಯ್ಯಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥

ಭಾವ ಮನಕ್ಕೆ – ಹೃದಯ ಮನಕ್ಕೆ, ಲಿಂಗವ ಧರಿಸಿ – ಪ್ರಾಣಭಾವಲಿಂಗವನು ಧಾರಣ ಮಾಡಿಕೊಂಡು, ಕಾಯಕ್ಕೆ ಲಿಂಗವಿಲ್ಲದಿರಬಹುದೆ – ಅಂಗದಲ್ಲಿ ಇಷ್ಟಲಿಂಗವು ಇಲ್ಲದಿರಬಹುದೆ, ಎರಡಂಗ ಭಕ್ತರಾಗಿ – ಮನದಲ್ಲಿ ಪ್ರಾಣಲಿಂಗ, ಭಾವದಲ್ಲಿ ಭಾವಲಿಂಗವು, ಸಂಬಂಧವಾಗಿ, ಒಂದಂಗ ಭವಿಯಾಗಿಪ್ಪ ಅಂಗದಲ್ಲಿ ಇಷ್ಟಲಿಂಗವು ಸಂಬಂಧವಿಲ್ಲದಿರುವ, ಭ್ರಾಂತರ ಜೀವ ಭಾವದ ಭ್ರಮಣೆಯನ್ನುಳ್ಳವರ, ಮುಖವ, ವದನವನು, ನೋಡಲಾಗದು – ನಿರೀಕ್ಷೆಯ ಮಾಡಲಾಗದು, ತನು ಮನ ಭಾವದಲ್ಲಿ – ತನು ಮನ – ತನುಮನ ಪ್ರಾಣಂಗಳಲ್ಲಿ, ಲಿಂಗವ ಧರಿಸಿ – ಇಷ್ಟ ಪ್ರಾಣ ಭಾವಲಿಂಗವನು ಧಾರಣವ ಮಾಡಿಕೊಂಡು, ಲಿಂಗತ್ರಯಕ್ಕೆ – ಲಿಂಗಮೂರಕ್ಕೆ, ಅಂಗತ್ರಯಕ್ಕೆ – ಅಂಗ ಮೂರಕ್ಕೆ, ಅಗಲಿಕೆಯಿಲ್ಲದೆ – ವಿಯೋಗವಿಲ್ಲದೆ, ಅಚಲಿತನಾಗಿರ್ದೆನಯ್ಯಾ – ಚಲನೆಯಿಲ್ಲದಾತನಾಗಿರ್ದೆನಯ್ಯಾ, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ– ಸಂಪಾದಕರು– ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು-ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಗಮಕ ಗೋಷ್ಠಿಗಳೆಲ್ಲ ಮನದ ನೆಮ್ಮದಿಗಾಗಿ
ಚಮಕ ರುದ್ರಗಳೆಲ್ಲ ಒಳಹದಕೆ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಲಪಕ್ಷಿಯ ಚಲನೆ ಮುಮ್ಮುಖವೆಂದಿಗೂ
ಜಾಲ ಜಟಿಲಗಳೆಲ್ಲ ಅದರೊಳಗು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಷಟ್‌ಸ್ಥಲ ಪಂಚಾಚಾರ ಅಷ್ಟಾವರಣಗಳೆಲ್ಲ
ತ್ರಿವಿಧ ದಾಸೋಹದ ತೀವಟಿಗೆ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗಂಡಹೆಂಡತಿ ಮತ್ತೆ ಸಂತಾನವೆಂಬುದು
ಲಿಂಗದೇವನಿಗರ್ಪಿತವಾಗುವುದು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಕ್ತಿಯೆಂಬುದು ಪೃಥ್ವಿ ತತ್ತ್ವವೆಂಬುದು ಹಣ್ಣು
ನಿತ್ಯ ನೆನಪಿರಲಿ ಕೊನೆತನಕ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರಿವು ಅನುಭಾವದ ಶ್ರೀ ಬೆಳಗೆ ಘನತತ್ತ್ವ
ಕರಿಯು ಸಂಪದವು ಜಗದೊಳಗೆ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸ್ನೇಹಪ್ರೀತಿಗಳೆಲ್ಲ ಜೀವನದ ಮಲ್ಲಿಗೆಯು
ಜೀವಧಾತುವವಕೆ ನಡೆನುಡಿಯು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾವುಂಟು ಜೀವನದಿ ಬೇವು ಸಹ ತಾನುಂಟು
ಮಾವು ಬೇವಿನ ರುಚಿಯು ನಿನಗುಂಟು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗಕರ್ಪಿತವಾದೆ ದುಡಿದು ನೀತರಬೇಕು
ತರದಿರು ನೀನೆಂದುದು ದುಡಿಯದುದ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹುಲಿಯುಂಟು ಮನದೊಳಗೆ ಹುಲ್ಲೆಯು ತಾನುಂಟು
ಹುಲಿ ಹುಲ್ಲೆಗಳೆರಡು ಒಳಗುಂಟು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪ್ರೊ. ಹೆಚ್.ವಿ. ವೀರಭದ್ರಯ್ಯ



ಸ್ಮರಣೆ

# ಬಸವ ಮಹಾಬೆಳಗು

– ಪೂಜ್ಯ ಶ್ರೀ ಬಸವಲಿಂಗ ಪಟ್ಟದ್ದೇವರು *

ಮರ್ತ್ಯಲೋಕದ ಮಹಾಮನೆ ಹಾಳಾಗಿ ಹೋಗಬಾರದೆಂದು,
ಕರ್ತನಟ್ಟಿದನಯ್ಯಾ ಒಬ್ಬ ಶಿವಶರಣನ,
ಆ ಶರಣ ಬಂದು ಕಲ್ಯಾಣವೆಂಬ ಶಿವಪೂರವ ಕೈಲಾಸ ಮಾಡಿ,
ರುದ್ರಗಣ, ಪ್ರಮಥಗಣರೆಲ್ಲರ ಹಿಡಿತಂದು,
ಅಸಂಖ್ಯಾತರೆಂದು ಹೆಸರಿಟ್ಟು ಕರೆದು,
ಭಕ್ತಿಯ ಸ್ಥಳಕುಳವ ಶ್ರುತದೃಷ್ಟ ಪವಾಡವಂ ಮೆರೆದು ತೋರಿ,
ಜಗವರಿಯೆ ಶಿವಾಚಾರದ ಧ್ವಜವನೆತ್ತಿಸಿ,
ಮರ್ತ್ಯಲೋಕ ಶಿವಲೋಕವೆರಡಕ್ಕೆ ನಿಚ್ಚಣಿಕೆಯಾದನು.
ಶಿವಶರಣನ ಮನೆಯೊಳಗಿಪ್ಪ ಶಿವಗಣಂಗಳ ತಿಂಥಿಣಿಯ ಕಂಡು,
ಎನ್ನ ಮನ ಉಬ್ಬಿ ಡೊಬ್ಬಿ ಓಲಾಡುತ್ತಿದೆಯಯ್ಯಾ,
ನಮ್ಮ ಗುಹೇಶ್ವರನ ಶರಣ ಸಂಗನ ಬಸವಣ್ಣನ,
ದಾಸೋಹದ ಘನವನೇನೆಂದೆನಬಹುದು ನೋಡಾ ! ಸಿದ್ಧರಾಮಯ್ಯ.

– ಅಲ್ಲಮಪ್ರಭುದೇವ

ಹನ್ನೆರಡನೆಯ ಶತಮಾನದ ಕಲ್ಯಾಣ ರಾಜ್ಯದ ವರ್ಣನೆಯನ್ನು ಮೇಲೆ ಪುಸ್ತಕದಲ್ಲಿ ಓದಬೇಕಿಲ್ಲ. ಒಂದು ಲಕ್ಷದ ತೊಂಭತ್ತಾರು ಸಾವಿರ ಜಂಗಮರಿಗೆ ನಿತ್ಯ ದಾಸೋಹ ನಡೆಯುತ್ತಿತ್ತು ಎಂಬುದು ಚರಿತ್ರೆ ತೆಗೆದು ಓದಬೇಕಾಗಿಲ್ಲ. ವಚನ ಸಾಹಿತ್ಯದಲ್ಲಿ ನೋಡುವ ಅಗತ್ಯವಿಲ್ಲ. ಮತ್ತೊಮ್ಮೆ ಸಂಗನಬಸವಣ್ಣನವರ ದಾಸೋಹ ಘನವ ಪ್ರತ್ಯಕ್ಷವಾಗಿ ಪೂಜ್ಯಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಸಿದ್ಧಗಂಗಾ ಕ್ಷೇತ್ರಕ್ಕೆ ಹೋದರೆ, ಅಂಥ ಮಹಾದಾಸೋಹದ ಘನವ ನೋಡುತ್ತೇವೆ. ಬಸವ ಕಲ್ಯಾಣದ ಅನುಭವ ಮಂಟಪ ಅಷ್ಟೇ ಅಲ್ಲ, ಬಸವ ಕಲ್ಯಾಣವೇ, ಬಸವ ಸಾಮ್ರಾಜ್ಯವೇ ಸಿದ್ಧಗಂಗೆಯಲ್ಲಿ ತಂದಿಳಿಸಿದ ಶ್ರೇಯಸ್ಸು ಪೂಜ್ಯರದು.

ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರಹಂಕಾರ,
ಪ್ರಾಣದಲ್ಲಿ ನಿರ್ಭಯ, ಚಿತ್ತದಲ್ಲಿ ನಿರಪೇಕ್ಷ,
ವಿಷಯದಲ್ಲಿ ಉದಾಸೀನ, ಭಾವದಲ್ಲಿ ದಿಗಂಬರ,
ಜ್ಞಾನದಲ್ಲಿ ಪರಮಾನಂದ, ನೆಲೆಗೊಂಡ ಬಳಿಕ,
ಸೌರಾಷ್ಟ್ರ ಸೋಮೇಶ್ವರ ಲಿಂಗವು ಬೇರಿಲ್ಲ ಕಾಣಿರೋ.

– ಆದಯ್ಯ

ಈ ವಚನದ ಶಬ್ದ ಶಬ್ದಗಳಲ್ಲಿ, ಸಾಲು ಸಾಲುಗಳಲ್ಲಿ ಶ್ರೀಗಳ ವ್ಯಕ್ತಿತ್ವ ಅಡಗಿದೆ. ಶತಮಾನದ ಅದ್ಭುತ. ವಿಶ್ವಗುರು ಬಸವಣ್ಣನವರು ಕೂಡಲಸಂಗನ ದರ್ಶನ ಪಡೆದದ್ದು ವಿಜಾಪುರ ಜಿಲ್ಲೆಯ ಕೂಡಲ ಸಂಗಮದಲ್ಲಿ ಅಲ್ಲ, ತಮ್ಮ ಅಂಗೈಯಲ್ಲಿರುವ ಇಷ್ಟಲಿಂಗದಲ್ಲಿಯೂ ಸಂಗಮನಾಥನನ್ನು ಕಾಣಲಿಲ್ಲ. ಬಸವಣ್ಣನವರು ನಿಜವಾದ ಕೂಡಲ ಸಂಗಮನಾಥನನ್ನು ಕಂಡದ್ದು, ಡೋಹಾರ ಕಕ್ಕಯ್ಯನ ಹೃದಯದಲ್ಲಿ, ಮಾದಾರ ಚನ್ನಯ್ಯನ ಹೃದಯದಲ್ಲಿ, ಜೀವಕೋಟಿಗಳ ಹೃದಯದಲ್ಲಿ ಎಂಬುದು ನೆನಪಿನಲ್ಲಿಟ್ಟುಕೊಳ್ಳಬೇಕು. ಅದೇ ರೀತಿಯಾಗಿ ಪೂಜ್ಯರು ಬಸವ ದರ್ಶನ

* ಹಿರೇಮಠ ಸಂಸ್ಥಾನ, ಭಾಲ್ಕಿ, ಬೀದರ್ ಜಿಲ್ಲೆ

ಪಡೆದದ್ದು ಸಾವಿರ ಸಾವಿರ ಮಕ್ಕಳ ಹೃದಯದಲ್ಲಿ, ದೀನ ದುಃಖಿತರ ಹೃದಯದಲ್ಲಿ ಬಸವ ದರ್ಶನ ಅನುದಿನವೂ ಮಾಡುತ್ತಿದ್ದರು.

ಶ್ರೀಮಠದ ಪೀಠವನ್ನಲಂಕರಿಸಿ ತೊಂಬತ್ತು ವರ್ಷವಾದವರೂ ಪೂಜ್ಯರು ಜಡವಾದ ಪೀಠದ ಮೇಲೆ ಕೂಡಲಿಲ್ಲ. ಭಕ್ತರ ಹೃದಯ ಪೀಠವನ್ನಲಂಕರಿಸಿದರು. ಜನಮನದ ಹೃದಯದ ಪೀಠದಲ್ಲಿ ವಿರಾಜಮಾನ ರಾದರು. ದೀನದಲಿತರ ಬೆಳಕಾದರು. ಅನಾಥ ಹೃದಯಿಗಳ ಶ್ರೀ ರಕ್ಷೆಯಾದರು.

ಶಿವಯೋಗಿಯು ಸುಳಿದ ಸುಳುಹು ಜಗತ್ಪಾವನ ।
ಮೆಟ್ಟಿದ ಧರೆಯೆಲ್ಲ ಪವಿತ್ರ ॥
ನಿಮಿಷಾರ್ಥವಿದ್ದ ಸ್ಥಲವೆಲ್ಲ ಅವಿಮುಕ್ತ ಕ್ಷೇತ್ರ ।
ಹೊಕ್ಕ ಜಲವೆಲ್ಲ ಪುಣ್ಯತೀರ್ಥ ॥
ಏರಿದ ಬೆಟ್ಟವೆಲ್ಲ ಶಿವಪರ್ವತ ।
ಕೃಪೆಯಿಂದ ನೋಡಿದ ಜನರೆಲ್ಲ ಸಾಲೋಕ್ಯರು ॥
ಒಡನೆ ಸಂಭಾಷಿಸಿದವರೆಲ್ಲ ಸದ್ಯೋನ್ಮುಕ್ತರು ।
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ ॥

ಪರಮಪೂಜ್ಯ ಶ್ರೀಗಳನ್ನು ನೋಡಿಯೇ ಸಿದ್ಧಲಿಂಗೇಶ್ವರರು ಈ ವಚನ ಬರೆದಿದ್ದಾರೇನೋ ಎನಿಸುತ್ತದೆ. ಅಷ್ಟೊಂದು ಅರ್ಥಪೂರ್ಣವಾಗಿ ಹೋಲುತ್ತದೆ. "ಸಕಲವನೆಲ್ಲ ಲಿಂಗದೊಳಗೆ ತೋರಿದನು. ಆ ಲಿಂಗದ ಬೆಳಗ ಸಕಲದೊಳಗೆ ತೋರಿದನು" ಎನ್ನುವ ಶರಣವಾಣಿಯ್ನು ಸತ್ಯವಾಗಿಸಿದ್ದರು ಶ್ರೀಗಳು. ಇಂಥ ಶ್ರೀಗಳ ಕಾಲದಲ್ಲಿ ನಾವು ಬದುಕಿದ್ದೇ ಒಂದು ಭಾಗ್ಯ. ಡಾ॥ ಸಿದ್ಧಯ್ಯ ಪುರಾಣಿಕರು ಹೇಳುವಂತೆ "ಈ ಸರ್ವಾಂಗ ಲಿಂಗಿಯುಲ್ಲಿ ಯಾವುದನ್ನು ಮೆಚ್ಚುವುದೆಂದು ದಿಗ್ಭ್ರಮೆಯಾಗುತ್ತದೆ. ನಿಶ್ಚಿತ ಜ್ಞಾನವನ್ನೆ? ಉಜ್ವಲ ವೈರಾಗ್ಯವನ್ನೆ? ಶಮದಮಾದಿ ದೈವೀಸಂಪತ್ತನ್ನೆ? ನಿರ್ಮಲ ಕ್ರಿಯೆಯನ್ನೆ? ಬಹುಭಾಷಾ ಪಾರಾಂಗತಿ ಯನ್ನೆ? ಪವಿತ್ರ ಜೀವನವನ್ನೆ? ಸಕಲ ಜೀವರಾಶಿಗಳನ್ನು ತನ್ನ ತೆಕ್ಕೆಯಲ್ಲಿ ಒಳಗೊಳ್ಳುವ ಆಪಾರ ಅನುಕಂಪವನ್ನೆ? ಬೆಕ್ಕಸ ಬೆರಗುಗೊಳಿಸುವ ಶಿಕ್ಷಣ ಸಂಸ್ಥೆಗಳ ಸಂಸ್ಥಾಪನೆಯನ್ನೆ? ಪಂಡಿತ ಪಾಮರರಿಬ್ಬರನ್ನೂ ಏಕಪ್ರಕಾರವಾಗಿ ಮೆಚ್ಚಿಸುವ ಮಾತುಗಾರಿಕೆಯನ್ನೆ? ವೈಜ್ಞಾನಿಕ ದೃಷ್ಟಿಯನ್ನೆ? ಆಧ್ಯಾತ್ಮಿಕ ಔನ್ನತ್ಯವನ್ನೆ? ಸ್ವಧರ್ಮನಿಷ್ಠೆ ಪರಧರ್ಮ ಸಹಿಷ್ಣುತೆಗಳನ್ನೆ? ವಿದ್ಯಾರ್ಥಿ ಮೇಲಣ ವಾತ್ಸಲ್ಯವನ್ನೆ? ರಾಷ್ಟ್ರನಿರ್ಮಾಣ ಕಾರ್ಯ ದುರಂಧರತೆಯನ್ನೆ? ದೀನ ಬಂಧುತ್ವವನ್ನೆ? ಕವಿ ಕಲಾವಿದ ವಿದ್ವಾಂಸರಿಗೆ ನಿರಂತರ ನೀಡುತ್ತಿರುವ ಆಶ್ರಯವನ್ನೆ? ಸಾಹಿತ್ಯ ಸಂಸ್ಕೃತಿಗಳ ಪೋಷಣೆಯನ್ನೆ? ಸಂಘಟನಾ ಶಕ್ತಿಯನ್ನೆ? ಶಿವಮಂತ್ರ ಸಿದ್ಧಿಯನ್ನೆ? ಎಷ್ಟು ಜನರು ಬಂದು ಬೇಡಿ ಕಾಡಿದರೂ, ಎಂಥ ವಿಘ್ನಗಳು ಎದುರಾದರೂ ಎಳ್ಳಷ್ಟು ಬೇಸರ, ಮುನಿಸು, ದಣಿವುಗಳನ್ನು ತೋರದ ಸದಾ ಸುಪ್ರಸನ್ನವದನವನ್ನೆ? ಬಹು ವಿಷಯ ಪರಿಣತಿಯನ್ನೆ? ಜಗಳಗಳನ್ನು ಬಗೆಹರಿಸುವ ವ್ಯವಹಾರ ಕುಶಲತೆಯನ್ನೆ? ದಿನ ದಿನವೂ ಎಣಿಕೆಯಿಲ್ಲದಂತೆ ಬರುವ ಭಕ್ತರ ವೈಯಕ್ತಿಕ ಸಮಸ್ಯೆಗಳಿಂದ ಆರಂಭಿಸಿ ದಾಸೋಹ, ವಿದ್ಯಾರ್ಥಿ ನಿಲಯ, ಶಾಲೆ ಕಾಲೇಜುಗಳ ಜಟಿಲ ಸಮಸ್ಯೆ ಗಳವರೆಗೆ ಎಲ್ಲವನ್ನೂ ಲೀಲಾಜಾಲವಾಗಿ ಪರಿಹರಿಸುವ ಪರಮಾದ್ಭುತವನ್ನೆ? ಉದ್ಧರಣೆಗಳನ್ನು ಬರೆಯುವು ದರಿಂದ ಸರ್ವೋದ್ಧಾರದ ಸಮಗ್ರ ಯೋಜನೆಗಳವರೆಗೆ ಸರ್ವ ಕಾರ್ಯಗಳಲ್ಲಿಯೂ ಒಡಮೂಡುವ ಕಾಯಕ ನಿಷ್ಠೆಯನ್ನೇ? ಗಡಿಯಾರವೂ ನಾಚಿಕೊಳ್ಳುವಂತಹ ಸಮಯ ಪರಿಪಾಲನೆಯನ್ನೆ? ಕರಣ ವಿಜಯ, ಜಿತೇಂದ್ರಿಯತ್ವಗಳನ್ನೆ? ಆಲೋಚಿಸಿದನಿತೂ ಅಪಾರವಾಗಿ ತೋರುವ ಈ ಆಧ್ಯಾತ್ಮ ಸೂರ್ಯರ ಅಗಾಧವಾದ, ಅವರ್ಣನೀಯವಾದ ವ್ಯಕ್ತಿತ್ವದ ಎಲ್ಲ ಅಂಶಗಳನ್ನು ಗುರುತಿಸಿ ಅವುಗಳ ಒಟ್ಟು ಬೆಲೆಯನ್ನು ಕಟ್ಟ ಬಲ್ಲವರಾರು?"

ಜಗದಗಲ ಮುಗಿಲಗಲವಾದ ಶ್ರೀಗಳ ವ್ಯಕ್ತಿತ್ವ ನಮಗೆ ಬಿತ್ತರಿಸುವುದು ಸಾಧ್ಯವೇ? "ಕೊಡದೊಳಗೆಷ್ಟು ನಿಲ್ಲುವುದು ಸಮುದ್ರಜಳಂ" ಎನ್ನುವ ಭಾವ ನನ್ನಲ್ಲಿದೆ. ಅವರ ಆಶೀರ್ವಾದವೇ ನಮಗೆ ರಕ್ಷಾಕವಚ. ಬಸವ ಮಹಾ ಬೆಳಗು ನಮ್ಮೆಲ್ಲರ ಹೃದಯದಲ್ಲಿ ತೊಳಗಿ ಬೆಳಗಲಿ. ಜಗದ ಜನಕೋಟಿಯ ಹೃದಯದಲ್ಲಿ ತೊಳಗಿ ಬೆಳಗಲಿ ಎಂದು ಸದಾಕಾಲ ಪ್ರಾರ್ಥಿಸುತ್ತೇನೆ.



ಸ್ಮರಣೆ

# ಪರಮಪೂಜ್ಯರು ಒಂದು ಜೀವಂತ ತತ್ತ್ವಜ್ಞಾನ

– ಡಾ. ಶ್ರೀ ಶಿವಾನಂದ ಶಿವಚಾರ್ಯರು *

ಸಿದ್ಧಗಂಗೆ ಎಂದರೆ ಅಂತಃಕರಣ! ಅಂತಃಕರಣವೆಂದರೆ ಸಿದ್ಧಗಂಗೆ!! ಅಂತಃಕರಣವೇ ಸಿದ್ಧಗಂಗೆಯ ಅಂತರಂಗ. ಇದು ಧರ್ಮಕ್ಷೇತ್ರವೂ ಹೌದು. ಅನ್ನಕ್ಷೇತ್ರವೂ ಹೌದು ಮತ್ತು ಪುಣ್ಯಕ್ಷೇತ್ರವೂ ಹೌದು. ಇಲ್ಲಿ ಹಸಿದ ಹೊಟ್ಟೆಗಳು ಉಂಡು ತಣಿಯುತ್ತವೆ, ನೊಂದ ಮನಸ್ಸುಗಳು ನಲಿದು ಹಾಡುತ್ತವೆ. 'ಅಯ್ಯಾ' ಎಂದು ಬಂದವರಿಗೆ ಇಲ್ಲಿ ಆಶ್ರಯವಿದೆ. 'ಅಯ್ಯೋ' ಎಂದು ಬಂದವರಿಗೆ ಸಾಂತ್ವನವಿದೆ. ಜೀವನದ ಸಂಘರ್ಷದಲ್ಲಿ ನೊಂದು ಬೆಂದವರಿಗೆ ಮತ್ತು ಸೋತು ನಿಂದವರಿಗೆ ಸಿದ್ಧಗಂಗೆ ಮರುಹುಟ್ಟು ಕೊಡುತ್ತದೆ. ನೊಂದವರ ನೋವಿಗೆ ಇಲ್ಲಿ ಸಾಂತ್ವನವಿದೆ, ಬಳಲಿದವರ ಬಾಳಿಗಿಲ್ಲಿ ಆಶ್ರಯವಿದೆ. ನಿರಾಶ್ರಿತರು ಇಲ್ಲಿ ಬಂದು ನಿಶ್ಚಿಂತರಾಗುತ್ತಾರೆ. ಬಳಲಿದವರು ಇಲ್ಲಿ ಬಂದು ಬವಣೆ ನೀಗುತ್ತಾರೆ. ಬಡ ಮಕ್ಕಳಿಗಂತೂ ಇದು ಮಾತಾ ಅನ್ನಪೂರ್ಣೇಶ್ವರಿಯ ಮಡಿಲು ಮತ್ತು ವಿದ್ಯಾಧಿದೇವತೆ ಶಾರದೆಯ ತೊಟ್ಟಿಲಿದ್ದ ಹಾಗೆ !! ಆದ್ದರಿಂದಲೇ ಸಹಸ್ರ ಸಹಸ್ರ ಮಕ್ಕಳು ಈ ಪವಿತ್ರ ಪರಿಸರದಲ್ಲಿ ಹಾಯಾಗಿ ಉಂಡಾಡಿಕೊಂಡು ಅಧ್ಯಯನನಿರತರಾಗಿದ್ದಾರೆ. ನಾವಂತೂ ಸಿದ್ಧಗಂಗೆಯನ್ನು ಅಭಿಮಾನದಿಂದ 'ಛಾತ್ರ ಕಾಶಿ' (ವಿದ್ಯಾರ್ಥಿ ಕಾಶಿ) ಎಂದು ಕರೆಯುತ್ತಿರುತ್ತೇವೆ. 'ಸಸ್ಯಭೂಯಿಷ್ಠ'ವಾದುದು 'ಸಸ್ಯಕಾಶಿ' ಯಾಗಿರುವುದಾದರೆ 'ವಿದ್ಯಾರ್ಥಿಭೂಯಿಷ್ಠ'ವಾಗಿರುವುದು 'ಛಾತ್ರಕಾಶಿ' (ವಿದ್ಯಾರ್ಥಿ ಕಾಶಿ) ಏಕಾಗಬಾರದು? ಎಂಬುವುದು ನಮ್ಮ ಸವಾಲು. ಕಾಡಿನಲ್ಲಿ ಹಕ್ಕಿಗಳ 'ಚಿಲಿಪಿಲಿ' ತುಂಬಿಕೊಂಡಿರುವ ಹಾಗೆ ಇಲ್ಲಿ ಮಕ್ಕಳ 'ಕಲರವ'ವು ತುಂಬಿಕೊಂಡಿರುತ್ತದೆ. ಪರಮಪೂಜ್ಯರ ಆಶ್ರಯದಲ್ಲಿರುವ ಮಕ್ಕಳು ತಾಯಿಯ ಮಡಿಲಲ್ಲಿದ್ದಷ್ಟೇ ಖುಶಿ ಖುಶಿಯಾಗಿರುತ್ತವೆ. ಮಕ್ಕಳ 'ಕಲರವ'ವಿಲ್ಲದ ಸಿದ್ಧಗಂಗೆಯನ್ನು ಊಹಿಸಿಕೊಳ್ಳುವುದು ಕಷ್ಟ, ಕರಕಷ್ಟವೆಂದು ಹೇಳಿದರೆ ಅದೇನೂ ಅತಿಶಯೋಕ್ತಿಯಲ್ಲ.

ಅನ್ನ ದಾಸೋಹ, ಜ್ಞಾನ ದಾಸೋಹ ಮತ್ತು ಕಾಯಕ ದಾಸೋಹ ಈ 'ತ್ರಿವಿಧ ದಾಸೋಹ'ಗಳ ತವರುಮನೆ ಸಿದ್ಧಗಂಗೆ. ಸಿದ್ಧಗಂಗೆಯು ದಾಸೋಹ ಪದದ '**ಪರ್ಯಾಯ ಪದ**'ವಾಗಿ ಬೆಳೆದು ನಿಂತಿದೆ. ದಾಸೋಹವೇ ಈ ಕ್ಷೇತ್ರದ ಉಸಿರು. ದಾಸೋಹವೇ ಈ ಕ್ಷೇತ್ರದ ಪ್ರಾಣ. ದಾಸೋಹ ಪದಕ್ಕೆ ಹೊಸ ವ್ಯಾಖ್ಯೆಯನ್ನು ಬರೆದ ಕೀರ್ತಿ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಸಂದಾಯವಾಗುತ್ತದೆ. ದಾನ ಮತ್ತು ದಾಸೋಹ ಇವೆರಡೂ '**ಸಮಾನ ಮನಸ್ಕ**'ಗಳಾಗಿದ್ದು '**ಸಮಾನ ವೇದಿಕೆ**'ಯ ಮೇಲೆ ನಿಂತುಕೊಂಡಿದ್ದರೂ ಸಹ ಇವೆರಡರಲ್ಲಿ ಅಜಗಜಾಂತರವಿದೆ. ಆರ್ಯರ '**ದಾನ ಪರಿಕಲ್ಪನೆ**'ಗಿಂತಲೂ ವೀರಶೈವರ '**ದಾಸೋಹ ಪರಿಕಲ್ಪನೆ**'ಯು ಶ್ರೇಷ್ಠ, ಶ್ರೇಷ್ಠತರವಾದುದು. ಅದೇನು ಕಾರಣವೆಂದೊಡೆ, "ದಾನದಲ್ಲಿ ಕೊಡುವ 'ಕೈ' ಮೇಲಿರುತ್ತದೆ. ಪಡೆದುಕೊಳ್ಳುವ 'ಕೈ' ಕೆಳಗಿರುತ್ತದೆ. ದಾನದಲ್ಲಿ ದಾನ ಕೊಟ್ಟವನು 'ಧನ್ಯತಾ ಭಾವ'ದಿಂದ ಪುಳಕಿತನಾಗುತ್ತಿದ್ದರೆ ದಾನ ತೆಗೆದುಕೊಂಡವನು 'ದೈನ್ಯ (ದೀನತಾ) ಭಾವ'ದಲ್ಲಿ ಮುಳುಗಿಕೊಂಡಿರುತ್ತಾನೆ. ದಾನದಲ್ಲಿ ಸೂಕ್ಷ್ಮವಾಗಿ ಅಹಂಕಾರವು ಸಂಚರಿಸಿಕೊಂಡಿರುತ್ತದೆ. ದಾಸೋಹದಲ್ಲಿ ನಿರ್ವಿಕಾರವು ಸ್ಥಾಯೀಯಾಗಿ ನಿಂತುಕೊಂಡಿರುತ್ತದೆ. ದಾಸೋಹದಲ್ಲಿ ಯಾರೊಬ್ಬರ ಕೈ ಮೇಲಿಲ್ಲ. ಯಾರೊಬ್ಬರ ಕೈ ಕೆಳಗಿಲ್ಲ. ದಾಸೋಹದಲ್ಲಿ ಯಾರೊಬ್ಬರೂ ಮೇಲರಿಮೆಯ ಭಾವನೆಯಿಂದ ಹಿಗ್ಗಿಕೊಳ್ಳುವುದಕ್ಕಾಗಲಿ ಅಥವಾ ಕೀಳರಿಮೆಯ ಭಾವನೆಯಿಂದ ಕುಗ್ಗಿಕೊಳ್ಳುವುದಕ್ಕಾಗಲಿ ಅವಕಾಶವಿರುವುದಿಲ್ಲ. ದಾನವಿದು 'ಸಾರ್ವಭೌಮವಾದ'ದ ಪ್ರತೀಕವಾದರೆ ದಾಸೋಹವಿದು 'ಸಮಾಜವಾದ'ದ ಪ್ರತೀಕ. ಆರ್ಷವಾಣಿಯಂತೆ ಎಲ್ಲರೂ "ಸಹನಾವವತು, ಸಹ ನೌ ಭುನಕ್ತು' ಎಂದು ಹಂಚಿಕೊಂಡು ಊಟ ಮಾಡುವುದು ದಾಸೋಹ. ಕೈ ಎತ್ತಿ ಕೊಡುವುದು ದಾನ ! ತುತ್ತು ಮಾಡಿ ಉಣಿಸುವುದು ದಾಸೋಹ !! ವೀರಶೈವ ಸಿದ್ಧಾಂತ 'ಸಹಜೀವನ' ಮತ್ತು 'ಸಹಭೋಜನ' 'ತತ್ತ್ವಪ್ರಣಾಳಿ'ಯನ್ನು ಪುಷ್ಟೀಕರಿಸುತ್ತದೆ. 'ದಾಸೋಹ' ಎಂಬೀ ಪದವನ್ನು ವೀರಶೈವ

* ಹಿರೇಮಠ, ತುಮಕೂರು

'ನಿಘಂಟಿ' (ಪಾರಿಭಾಷಿಕ ಕೋಶ)ನಲ್ಲಿ ಕಾಣುವುದಾದರೆ ಅದರ 'ಅರ್ಥ'ವನ್ನು ಸಿದ್ಧಗಂಗಾ ಕ್ಷೇತ್ರದಲ್ಲಿ ಕಾಣಬಹುದು. ಈ ಕ್ಷೇತ್ರದಲ್ಲಿ ಅನ್ನದೇವತೆ ಮಾತಾ ಅನ್ನಪೂರ್ಣೇಶ್ವರಿಯು ಪ್ರತ್ಯಕ್ಷವಾಗಿ ವಾಸ್ತವ್ಯ ಹೂಡಿ ಕೊಂಡಿದ್ದಾಳೆ. ಸಿದ್ಧಗಂಗಾ ಇದು ಅನ್ನಕ್ಷೇತ್ರ ! ಪರಮಪೂಜ್ಯರು ಅನ್ನಧನರು!! 'ಅನ್ನಧನದ ಮುಂದೆ ಇನ್ನು ಧನಗುಳುಂಟೇ?' ಬರೀ ಈ ಕ್ಷೇತ್ರದಲ್ಲಿ ಅನ್ನಧನವಷ್ಟೇ ತುಂಬಿಕೊಂಡಿಲ್ಲ. ಇಲ್ಲಿ ಸತತವೂ ಸಾಂತ್ವನ, ಸಹಾನುಭೂತಿ ಮತ್ತು ಅನುಕಂಪದ ಅಲೆಗಳು ಪ್ರವಹಿಸಿಕೊಂಡಿವೆ.

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳೊಂದು ಜೀವಂತ ತತ್ವಜ್ಞಾನ !! ಪೂಜ್ಯರು ದಂತಕಥೆಯಾಗಿ ಬೆಳೆದುನಿಂತಿದ್ದಾರೆ. ಅವರಲ್ಲಿ ಅನ್ನದೇವ ಮತ್ತು ಜ್ಞಾನದೇವ ಈರ್ವರೂ ಮಿಳಿತಗೊಂಡಿದ್ದಾರೆ. ಅವರನ್ನು 'ಜೀವಂತ ಅನ್ನಪೂರ್ಣೆ' ಎಂದು ಹೇಳಬಹುದು. ದಾಸೋಹ ಪರಿಕಲ್ಪನೆಗೆ ಹೊಸ ಆಯಾಮವನ್ನು ಒದಗಿಸಿಕೊಟ್ಟು ಅದನ್ನು ಅಕ್ಷರಶಃ ಚಲಾವಣೆಗೆ ತಂದ ಸಾಧನೆ ಮತ್ತು ಸಾಹಸ ಪರಮಪೂಜ್ಯರ 'ಕೀರ್ತಿ ಬತ್ತಳಿಕೆ'ಯನ್ನು ಸೇರಿಕೊಳ್ಳುತ್ತದೆ. ದಾಸೋಹವೇ ಪರಮಪೂಜ್ಯರ ಪೂಜೆ ಮತ್ತು ದಾಸೋಹವೇ ಪರಮಪೂಜ್ಯರ ಪ್ರಾರ್ಥನೆ. 'ಕೂಡಲಸಂಗಮ ದೇವ ತನಗೆ ಒಲಿವನೋ ಅಥವಾ ಒಲಿಯನೋ?' ಎಂಬ ಚಿಂತೆ ಯಾವ ರೀತಿ ಅಣ್ಣ ಬಸವಣ್ಣನಿಗೆ ಬಾಧಿಸುತ್ತಿತ್ತೋ ಅದೇ ರೀತಿ ಪರಮಪೂಜ್ಯ ಶ್ರೀ ಶ್ರೀಗಳವರಿಗೆ 'ಮಠದಲ್ಲಿನ ಮಕ್ಕಳು ಉಂಡರೋ ಇಲ್ಲವೋ' ಎಂಬ ಚಿಂತೆ ಸದಾ ಅವರನ್ನು ಬಾಧಿಸುತ್ತಿತ್ತು. ಮಕ್ಕಳಿಗೆ ಪ್ರಸಾದ ನೀಡುವಲ್ಲಿ ಸ್ವಲ್ಪ ವಿಳಂಬವಾದರೂ ಕೂಡ ಪೂಜ್ಯರು ಅದನ್ನು ಸಹಿಸಿಕೊಳ್ಳುತ್ತಿರಲಿಲ್ಲ. ಅದೆಂಥ ಗಣ್ಯಾತಿಗಣ್ಯ, ಮುಖ್ಯಾತಿಮುಖ್ಯ ಪ್ರತಿಷ್ಠಿತರುಗಳು ಅವರನ್ನು ಆವರಿಸಿಕೊಂಡಿದ್ದರೂ ಸಹ ಅವರು ಆ ಕೂಡಲೇ ದಾಸೋಹದ ಮನೆಗೆ ನಡೆದು ಬಿಡುತ್ತಿದ್ದರು. ತಕ್ಷಣ ವ್ಯವಸ್ಥೆಯನ್ನು ಸರಿಪಡಿಸಿ ಮಕ್ಕಳು ಉಂಡು ತೇಗಿಯಾದ ಮೇಲೆಯೆ ಅವರು ಪ್ರತಿಷ್ಠಿತರುಗಳತ್ತ ಮುಖ ಮಾಡುವುದು!! ಇಂಥ 'ಮಾತೃವಾತ್ಸಲ್ಯ' ಆ ಮಕ್ಕಳನ್ನು ಹೆತ್ತ ತಾಯಂದಿರಲ್ಲಿಯಾದರೂ ಇರುತ್ತದೆಯೋ ಇಲ್ಲವೋ ಎಂಬ ಸಂದೇಹ ಆಗಾಗ್ಗೆ ನಮ್ಮನ್ನು ಕಾಡುತ್ತಲೇ ಇರುತ್ತದೆ.

'ಅಣ್ಣ ಬಸವಣ್ಣ ಕಲ್ಯಾಣದಲ್ಲಿ ಪ್ರತಿದಿನವೂ ಒಂದು ಲಕ್ಷದ ತೊಂಬತ್ತಾರು ಸಾವಿರ ಜನಗಳಿಗೆ ಊಟ ಮಾಡಿಸುತ್ತಿದ್ದ' ಎಂಬ ವಿಷಯವನ್ನು ನಂಬಿದರೆ ನಂಬಬಹುದು ಇಲ್ಲವೆ ನಂಬದಿರಬಹುದು. ಅದು ನಮ್ಮ ಶ್ರದ್ಧೆ ಹಾಗೂ ನಂಬಿಕೆಗೆ ಬಿಟ್ಟ ವಿಷಯ. ಅಷ್ಟೊಂದು ಜನಗಳಿಗೆ ದಿನನಿತ್ಯದಲ್ಲಿ ಊಟವಮಾಡಿಸುವುದು ಸಾಮಾನ್ಯದ ವಿಷಯವೇನಲ್ಲ. ಹಾಗೆ ಮಾಡಿಸುವುದು ಅದೆಂಥ ಅಸಾಧ್ಯದ ಕೆಲಸವೆಂಬುದು ಎಲ್ಲರಿಗೂ ಗೊತ್ತಿದೆ. ಇಲ್ಲಿ ಗಮನಿಸಬೇಕಾದ ಇನ್ನೊಂದು ವಿಷಯವಿದೆ. ಅಂದು ಕಲ್ಯಾಣದಲ್ಲಿ ವಾಸಮಾಡಿಕೊಂಡಿದ್ದ ಬಹುಪಾಲು ಜನಗಳು 'ಲಿಂಗದೀಕ್ಷೆ'ಯನ್ನು ಮತ್ತು 'ಕಾಯಕ ದೀಕ್ಷೆ'ಯನ್ನು ಪಡೆದುಕೊಂಡವರು. ಸಾಮಾನ್ಯವಾಗಿ ಅವರೆಲ್ಲ ಶರಣರು. ಶರಣರಾರೂ ಬಸವಣ್ಣನವರ ಉಚಿತ ದಾಸೋಹದಲ್ಲಿ ಬಂದು ಊಟ ಮಾಡುತ್ತಿರಲಿಲ್ಲ. ಅವರು ಕಾಂಚುಕವನ್ನು ಮಾಡಿಕೊಂಡಿದ್ದು ತಮ್ಮ ಸ್ವಯಾರ್ಜಿತದಿಂದ ಬಂದದ್ದನ್ನು ಖರ್ಚಿಸಿ ಪ್ರಸಾದವನ್ನು ಸ್ವೀಕರಿಸುತ್ತಿದ್ದರು. ಅವರು ಅದೇನಿದ್ದರೂ ಸಹ ಕಷ್ಟಪಟ್ಟು ದುಡಿದು ತಮ್ಮ ದುಡಿಮೆಯಿಂದ ಬಂದ ದುಡ್ಡನ್ನು ವ್ಯಯಿಸಿ ಊಟ ಮಾಡುವ 'ಶಿಷ್ಟ ಅಭ್ಯಾಸ'ವನ್ನು ರೂಢಿಸಿಕೊಂಡಿದ್ದರು. ಅದುವೇ ಅವರ ತತ್ತ್ವವಾಗಿತ್ತು. ಮತ್ತದುವೇ ಅವರ ಸಿದ್ಧಾಂತವಾಗಿತ್ತು. 'ನಾಳೆಗಿರಲಿ' ಎಂದು ಒಂದಿಪ್ಪ ಅಕ್ಕಿಯನ್ನು ಹೆಚ್ಚಿಗೆ ಆಯ್ದುಕೊಂಡು ಬಂದರೆ 'ಈಸಕ್ಕಿಯ ಆಸೆ ನಿಮಗೇಕೆ? ಆಸೆ ಎಂಬುದು ಅರಸಿಂಗಲ್ಲದೆ ಶಿವಶರಣರಿಗುಂಟೇ ಅಯ್ಯಾ' ಎಂದು ಪತಿಯನ್ನೇ ತರಾಟೆಗೆ ತೆಗೆದುಕೊಂಡ ಪುಣ್ಯಸ್ತ್ರೀಯರಿರುವ ಆ ಕಾಲದಲ್ಲಿ ಎಲ್ಲಿಯಾದರೂ ಉಂಡು ಹೊಟ್ಟೆ ತುಂಬಿಸಿಕೊಂಡು ಲೋಕಾಭಿರಾಮವಾಗಿ ಮಾತನಾಡುತ್ತ ದೇಶಾವರಿ ತಿರುಗುವ ಅಭ್ಯಾಸವನ್ನು ಶರಣರು ರೂಢಿಸಿಕೊಂಡಿದ್ದರು ಎಂಬುವುದನ್ನು ಕಲ್ಪಿಸಿಕೊಳ್ಳಲೂ ಕೂಡ ಸಾಧ್ಯವಿಲ್ಲ. ಆ ರೀತಿ ಊಹಿಸಿಕೊಳ್ಳುವುದು ಕೂಡ ಕಷ್ಟ. ಇಂಥ ಪರಿಸ್ಥಿತಿಯಲ್ಲಿ ಬಸವಣ್ಣ ದಿನನಿತ್ಯದಲ್ಲಿ 'ಅದಷ್ಟೊಂದು ಜನಗಳನ್ನು ಊಟಕ್ಕಾಗಿ ಅದೆಲ್ಲಿಂದ ಕರೆದುತರುತ್ತಿದ್ದ?" ಎಂಬ ಪ್ರಶ್ನೆಯನ್ನು ಗಂಭೀರವಾಗಿ ಚಿಂತಿಸಬೇಕಾಗುತ್ತದೆ. ಆದ್ದರಿಂದಲೇ ನಾವದನ್ನು ನಂಬಿಕೆಗೆ ಬಿಟ್ಟ ವಿಷಯವೆಂದು ಹೇಳಿರುವುದು. ಆದರೆ ಸಿದ್ಧಗಂಗೆಯಲ್ಲಿ ನಿತ್ಯದಲ್ಲೂ ಹತ್ತು ಸಹಸ್ರ ಮಕ್ಕಳು ಮತ್ತು ಸಾವಿರ ಸಾವಿರ ಜನಗಳು ಊಟ ಮಾಡುತ್ತಾರೆ ಎಂದರೆ ನಾವದನ್ನು ನಂಬಲೇ ಬೇಕಾಗುತ್ತದೆ. ಏಕೆಂದರೆ ಇದು



ನಂಬಿಕೆಗೆ ಬಿಟ್ಟ ವಿಷಯವಲ್ಲ. ಇದು ದಿನನಿತ್ಯದಲ್ಲೂ ನಮ್ಮ 'ಕಣ್ಣೆದುರಿಗಿನ ತಳಮಳ'ಕ್ಕೆ ಸಿದ್ಧಗಂಗೆ ನೀಡುತ್ತಿರುವ ಪವಾಡಸದೃಶ ಚಿಕಿತ್ಸೆ !! ಇಲ್ಲಿನದು ಕಣ್ಣಿಗೆ ರಾಚುವ ವಸ್ತುನಿಷ್ಠ ವಾಸ್ತವ !! ಇದು ಊಹೆಯಲ್ಲ !! ಇದು ಪಾರದರ್ಶಕ ಸತ್ಯ. 'ದಾನಾದೇವ ತು ಕೈವಲ್ಯಮ್' ಎಂದು 'ಋಷಿ -ವಚನ'ಗಳು ಅಪ್ಪಣೆಕೊಡಿಸಿದರೆ ಪರಮಪೂಜ್ಯರು 'ದಾಸೋಹ ಏವ ತು ಜೀವನಮ್' ಎಂಬ ಮಾತಿಗೆ ಪ್ರಾಯೋಗಿಕ ಟಿಪ್ಪಣಿ ಬರೆದಿದ್ದಾರೆ. ಯಾವ ರೀತಿ ಮಹಾತ್ಮ ಗಾಂಧೀಜಿಯವರಿಗೆ 'ಸತ್ಯವೇ ಜೀವನ' ಮತ್ತು 'ಜೀವನವೆಂದರೆ ಸತ್ಯ'ವಾಗಿತ್ತೋ ಅದೇ ರೀತಿ ಪರಮಪೂಜ್ಯರಿಗೆ 'ದಾಸೋಹವೇ ಜೀವನ' ಮತ್ತು 'ಜೀವನವೇ ದಾಸೋಹ'ವಾಗಿತ್ತು.

"Charity is a virtue of the heart and not of the hand" 'ದಿ ಗಾರ್ಡಿಯನ್' ಎಂಬ ಪುಸ್ತಕದಲ್ಲಿ ಎಡಿಸನ್ ಹೇಳಿದ ಮಾತಿದು. ಈ ಮಾತು ಇಲ್ಲಿ ಉಲ್ಲೇಖನೀಯ. 'ಧರ್ಮ', 'ಧರ್ಮಾರ್ಥ' ಅಥವಾ 'ಸೇವೆ' ಎಂಬುವುದು ಹೃದಯದ ಮಾತು. ಅದು ಕೈಯಾಟವಲ್ಲ. ಮತ್ತದು 'ಕೈ' ಚಳಕವಲ್ಲ. ಕರುಣೆ ಎಂಬುವುದು ಹೃದಯಾಂತರಾಳದಿಂದ ಹೊರಹೊಮ್ಮಿ ಬರಬೇಕು. ಅದು ಮುಖ್ಯ.

ಜಾನ್ ಹಾಲ್ ಹೇಳುವ ಇನ್ನೊಂದು ಮಾತನ್ನು ಇಲ್ಲಿ ಗಮನಿಸಬೇಕು, "Give accroding to you means or God will make your means according to your giving 'ನೀನು ಕೈಲ್ಲಿರುವುದನ್ನು 'ಕೈ' ಬಿಚ್ಚಿ ಕೊಡುವುದನ್ನು ಕಲಿತುಕೋ. ಆಗ ಆ ದೇವರು ನಿನಗೆ 'ಕೈ' ತುಂಬ ಕೊಡುವುದನ್ನು ರೂಢಿಸಿಕೊಳ್ಳುತ್ತಾನೆ. 'ಸಿದ್ಧಗಂಗಾ ಕ್ಷೇತ್ರದ ದಾಸೋಹದ ವ್ಯವಸ್ಥೆಯನ್ನು ನೋಡಿದಾಗ ಈ ಮಾತು ಅಕ್ಷರಶಃ ಸತ್ಯವೆಂಬುವುದನ್ನು ಒಪ್ಪಿಕೊಳ್ಳಲೇ ಬೇಕಾಗುತ್ತದೆ. ಪೂಜ್ಯರ 'ಸಂಕಲ್ಪ ಶಕ್ತಿ' ತುಂಬ ದೊಡ್ಡದು. ಸಾವಿರಾರು ಮಕ್ಕಳಿಗೆ ಊಟ ಮಾಡಿಸಬೇಕು, ವಿದ್ಯಾ ಪ್ರದಾನ ಮಾಡಬೇಕೆಂಬ ಅವರ ಆ ಘನ 'ಮಹಾ ಸಂಕಲ್ಪ'ಕ್ಕೆ ಆ ದೇವನೇ 'ಸಹಕಾರಿ'ಯಾಗಿ ಮತ್ತು 'ಸಹಾಯಕ'ನಾಗಿ ನಿಂತುಕೊಂಡಿದ್ದಾನೆ ಎಂದೆನಿಸದೆ ಇರಲಾರದು.

ಪ್ರತಿ ಶೈಕ್ಷಣಿಕ ವರ್ಷದ ಪ್ರಾರಂಭದಲ್ಲಿ 'ಸುನಾಮಿ'ಯಂತೆ ನಾಡಿನುದ್ದಗಲಗಳಿಂದ ಹರಿದು ಬರುವ ಆ ಮಕ್ಕಳಿಗೆಲ್ಲ ಪೂಜ್ಯರು ಅದೇ ಹೇಗೆ ಊಟ, ವಸತಿಗಳ ವ್ಯವಸ್ಥೆ ಮಾಡುತ್ತಾರೋ ಆ ದೇವರೇ ಬಲ್ಲ !! ಬಡತನದ ಬೇಗೆಯಲ್ಲಿ ನೊಂದು ಬೆಂದು ಬಂದ ಮಕ್ಕಳಿಗೆ, ಅವರ 'ಮಾತಾಪಿತೃ'ಗಳಿಗೆ 'ಸ್ಥಳವಿಲ್ಲ, ಅವಕಾಶವಿಲ್ಲ'ವೆಂದು ಹೇಳದೆ ಯಾರನ್ನೂ ನಿರಾಶೆಗೆ ಒಳಗುಪಡಿಸದೆ ಎಲ್ಲರನ್ನೂ ಸಂತೈಸುವ ಮತ್ತು ಸಮಾಧಾನಿಸುವ ಈ 'ವಿಶ್ವಬಂಧು'ವನ್ನು ಮತ್ತು 'ವಸುಧೈವ ಕುಟುಂಬಿ'ಯನ್ನು ಕಂಡು ನಮಗಂತೂ ಆಶ್ಚರ್ಯವಾಗುತ್ತದೆ. ಪರಮಪೂಜ್ಯರು ಎಲ್ಲರನ್ನೂ ವಹಿಸಿಕೊಳ್ಳುತ್ತಾರೆ ಮತ್ತು ಎಲ್ಲವನ್ನೂ ಸಹಿಸಿಕೊಳ್ಳುತ್ತಾರೆ. ಅದು ಅವರ ಸ್ವಭಾವ !! ಬಸವಣ್ಣನವರು 'ಕೂಡಲ ಸಂಗಮದೇವ'ನನ್ನು ಕುರಿತು 'ನೀನೊಲಿದರೆ ಕೊರಡು ಕೊನರುವುದಯ್ಯ, ನೀನೊಲಿದರೆ ಬರಡು ಹಯನಹುದಯ್ಯ' ಎಂದು ಹೇಳಿದ ಹಾಗೆ ಪೂಜ್ಯ ಶ್ರೀ ಸಿದ್ಧಗಂಗೆ ಶ್ರೀಗಳು ಒಲಿದು ಹರಸಿದರೆ ಮತ್ತು ಹಾರೈಸಿದರೆ ಕೊರಡಿನಂತಿರುವ ಬಡಮಕ್ಕಳ ಬಾಳು ಕೊನರುವುದು ಮತ್ತು ಬರಡಿನಂತಿರುವ ಅವರ ಬದುಕಿನಲ್ಲಿ ಸಮೃದ್ಧಿಯ ಸಂಭ್ರಮ ಮತ್ತು ಹಯನು ತುಂಬಿಕೊಳ್ಳುವುದು. ಇದರಲ್ಲಿ ಸಂದೇಹವೇ ಇಲ್ಲ. ಅವರೊಲಿದು ಪದವಿಟ್ಟ ಅವರೊಲುಮೆಯ ಕಾರಣಿಕ ಸ್ಥಳ 'ಸಿದ್ಧಗಂಗೆ' ದೀನ, ದಲಿತ, ಆರ್ತ, ಅರ್ಥಾರ್ಥಿಗಳಿಗಂತೂ ಸಾಕ್ಷಾತ್ 'ಕಾಮಧೇನು' ಮತ್ತು 'ಕಲ್ಪವೃಕ್ಷ'ವಿದ್ದ ಹಾಗೆ.

ಪರಮಪೂಜ್ಯರು ತಮ್ಮ ಇಳಿವಯಸಿನಲ್ಲೂ ಪಾದರಸದಂತೆ ಓಡಾಡಿಕೊಂಡಿದ್ದರು. ಅವರಲ್ಲೊಂದು ಅದ್ಭುತವಾದ 'ಇಚ್ಛಾಶಕ್ತಿ' ಇತ್ತು. ಅವರು ತಾವು ಸ್ವಂತಕ್ಕೆ ಬೇವಿನ ರಸವನ್ನು ಕುಡಿದರೂ ಸಹ ಲೋಕಕಲ್ಯಾಣಕ್ಕಾಗಿ ನಿರಂತರವೂ ಜೇನಿನ ರಸವನ್ನು ಪ್ರವಿಸುತ್ತಲಿದ್ದರು. ಪರಮಪೂಜ್ಯರದು ಅಚ್ಚುಕಟ್ಟಾದ ಜೀವನಶೈಲಿ. ಯಾವುದೇ ತೆರನಾದ ಆಮಿಷಕ್ಕೂ ಅವರ ಜೀವನಶೈಲಿ ಬಲಿಯಾಗಲಿಲ್ಲ. ಗಾಳಿ, ಮಳೆ, ಚಳಿಗಳೇ ಬರಲಿ, ಮೈಯಲ್ಲಿ ಜ್ವರ, ನೆಗಡಿ, ಕೆಮ್ಮುಗಳೇ ಇರಲಿ, ಅವರ 'ಜೀವನ ಪೂಜಾ ಮಹಾವ್ರತ' ಒಂದಿನಿತೂ ಕೂಡ ಬದಲಾಗುವುದಿಲ್ಲ. ಕಾಯಿಲೆ, ಕಸಾಲೆಗಳಿಗೆ ಅವರ ಬಳಿ ಬರುವುದಕ್ಕೇ ಹೆದರುತ್ತಿತ್ತು !! ಏಕೆಂದರೆ ಅವುಗಳಿಗೆ ಅವರ ಬಳಿ 'ಸುಗ್ರಾಸ ರಾಜ ಆತಿಥ್ಯ' ದೊರೆಯುತ್ತಿರಲಿಲ್ಲ. ಹೇಳುವವರು ಕೇಳುವವರು ಯಾರೂ ಇಲ್ಲವಾಗಿ ಅವು ಬಂದ ದಾರಿಗೆ ಸುಂಕವಿಲ್ಲದಂತೆ ತಮ್ಮ ಪಾಡಿಗೆ ತಾವು ಜರುಗಿಕೊಂಡು ಹೋಗಬೇಕಷ್ಟೇ !!

ಪರಮಪೂಜ್ಯರದೊಂದು ಸುದೀರ್ಘ ಜೀವನ ಯಾತ್ರೆ !! ಈ ಒಂದು ಸುದೀರ್ಘ ಜೀವನ ಯಾತ್ರೆಯ ಅವಧಿಯಲ್ಲಿ ಅದೆಷ್ಟೊಂದು ಜೀವಗಳು ಅವರ ಮುಂದೆ

ಕಳಚಿಕೊಂಡಿಲ್ಲ? ಅದೆಷ್ಟೊಂದು ಮುಖಗಳು ಅವರ ಮುಂದೆ ಬಿಳುಚಿಕೊಂಡಿಲ್ಲ? ಆದರೆ ಅವರ ಜೀವನಯಾತ್ರೆ ಮಾತ್ರ 'ಸ್ಥಿತಪ್ರಜ್ಞ'ನ ಹಾಗೆ ಸುಖ-ದುಃಖಗಳನ್ನು, ಸರಸ-ವಿರಸಗಳನ್ನು, ಸಮತೆ-ವಿಷಮತೆಗಳನ್ನು ಸಮಾನವಾಗಿ ಸ್ವೀಕರಿಸಿ ನಿರಂತರವಾಗಿ ಸಾಗುತ್ತಿತ್ತು. ಪೂಜ್ಯ ಶ್ರೀ ಶ್ರೀಗಳವರು ತಮಗೊಂದು 'ಪರ್ಯಾಯ'ವಿಲ್ಲದಂತೆ ಬೆಳೆದು ನಿಂತಿದ್ದರು. ಅವರಿಗೊಂದು 'ಪರ್ಯಾಯ'ವನ್ನು ಊಹಿಸಿಕೊಳ್ಳಲು ಕೂಡ ಭಕ್ತರಿಗೆ ಸಾಧ್ಯವಾಗುತ್ತಿಲ್ಲ. ಪೂಜ್ಯರು 'ತಮಗೆ ತಾವೇ ಮಾದರಿ'ಯಾಗಿ ಬೆಳೆದಿದ್ದರು. ಅವರಲ್ಲಿನ 'ಗುರುಭಕ್ತಿ'ಯನ್ನು 'ಏಕಲವ್ಯ'ನ 'ಗುರುಭಕ್ತಿ'ಗೆ ಹೋಲಿಸಬಹುದು. ಈಗಲೂ 'ತಪೋನಿಧಿ' ಪರಮಪೂಜ್ಯ ಶ್ರೀ ಉದ್ದಾನ ಶಿವಯೋಗಿಗಳನ್ನು ಜ್ಞಾಪಿಸಿಕೊಂಡರೆ ಸಾಕು ಅವರು ಗದ್ಗಿತರಾಗುತ್ತಿದ್ದರು. ಮುಪ್ಪಡರಿದ ಅವರ ದೇಹ ಇನ್ನಷ್ಟು ಮತ್ತಷ್ಟು ವಿನಮ್ರತೆಯಿಂದ ಬಾಗಿಕೊಳ್ಳುತ್ತದೆ. ತಮ್ಮನ್ನು 'ಚಿನ್ನ'ದಂತೆ ಅಗ್ನಿಪ್ಪಿಕೆಯಲ್ಲಿಟ್ಟು ಪರಿಶೋಧಿಸಿ ಪರಿಶುದ್ಧಿಸಿ 'ಪ್ರಮಾಣಪತ್ರ' ವನ್ನು ನೀಡಿದ ಆ ಮಹಾನುಭಾವಿಯನ್ನು ನೆನೆಯುತ್ತಲೇ ಅವರು ಪುಳಕಿತರಾಗುತ್ತಾರೆ. ಪರಮಪೂಜ್ಯರ 'ಗುರುಭಕ್ತಿ'ಯನ್ನು ನಮ್ಮ ಇಂದಿನ ಯುವಜನಾಂಗವು 'ಪಠ್ಯ'ವಾಗಿಸಿಕೊಂಡು ಓದಬೇಕು. ಆಗ ಮಾತ್ರ ನಮ್ಮ ಯುವ ಜನಾಂಗಕ್ಕೆ ಸಾರ್ಥಕ್ಯದ ಮತ್ತು ಸಾಫಲ್ಯದ ಬದುಕನ್ನು ಬದುಕುವುದು ಸಾಧ್ಯವಾದೀತು !!

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳನ್ನು ಜನಗಳು ಭಕ್ತಪರವಶತೆಯಿಂದ 'ನಡೆದಾಡುವ ದೇವರು', 'ಮಾತನಾಡುವ ದೈವ', 'ಅಭಿನವ ಬಸವಣ್ಣ' ಎಂದಿತ್ಯಾದಿಯಾಗಿ ಕರೆದು ಸಂತೋಷಪಡುತ್ತಾರೆ. ಆದರೆ ಪರಮಪೂಜ್ಯರು ಆ ಎಲ್ಲ ಮಾತುಗಳಿಗೆ ಕಿವಿಯಾಗಿ ನಿಂತುಕೊಳ್ಳದೆ ತಮ್ಮನ್ನು ತಾವು 'ಕಾಯದ ತಪಸ್ವಿ'ಗಳೆಂದು ಗುರುತಿಸಿಕೊಂಡು ಆ ದಿಶೆಯಲ್ಲಿ ಕಾಯಕನಿರತರಾಗಿದ್ದರು. ಈ ಇಳಿವಯಸ್ಸಿನಲ್ಲೂ ಅವರಲ್ಲಿ ಅದೆಂಥ ಪೂಜಾನಿಷ್ಠೆ?!! ಬೆಳಗಿನ ಎರಡು ಗಂಟೆಗೆ ಅವರ ಪೂಜೆ ಪ್ರಾರಂಭವಾಗುತ್ತದೆ. ಸಾಮಾನ್ಯವಾಗಿ ಎಲ್ಲರನ್ನೂ ಗಡಿಯಾರ ಎಚ್ಚರಿಸಿದರೆ ಸಿದ್ಧಗಂಗೆಯಲ್ಲಿ ಪೂಜ್ಯರು ಗಡಿಯಾರವನ್ನೇ ಎಚ್ಚರಿಸುತ್ತಿದ್ದರು. ಪರಮಪೂಜ್ಯರ 'ಸಮಯನಿಷ್ಠೆ'ಯನ್ನು ಮತ್ತು 'ಸಂಯಮನಿಷ್ಠೆ'ಯನ್ನು ಪ್ರತಿಯೊಬ್ಬರೂ ಕಲಿತುಕೊಳ್ಳಬೇಕು. ಪರಮಪೂಜ್ಯರೊಂದು ಸೊರಗದ ಸವೆಯದ ನಿರಂತರ ಚೈತನ್ಯ ಚಿಲುಮೆಯಾಗಿದ್ದರು!!

ಕರ್ನಾಟಕದ ಸಾವಿರಾರು ಮಠಗಳಲ್ಲಿ ಸಿದ್ಧಗಂಗೆ ಮಠಕ್ಕೆ ಶಿರೋಧಾರ್ಯ ಸ್ಥಾನವಿದೆ. ಪರಮಪೂಜ್ಯರ ಸಾಧನೆ ನಾಡಿನ ಮನೆಮಾತಾಗಿದೆ. ಪೂಜ್ಯರು 'ಸಾವಿಲ್ಲದ ಸಾಧನೆಯ ಹರಿಕಾರ'ರಾಗಿರುವುದರಿಂದ ಅವರು ಬದುಕಿರುವಾಗಲೇ ಪುರಾಣ, ಪುಣ್ಯಕಥೆಯಾಗಿ ಬೆಳೆದು ಬಿಟ್ಟಿದ್ದರು. ಅವರ ಸಮಗ್ರ ವ್ಯಕ್ತಿತ್ವವನ್ನು 'ಶಬ್ದತೋರಣ' ಗಳಿಂದ ಶೃಂಗರಿಸಿಡುವುದು ಕಷ್ಟಸಾಧ್ಯ. ಅವರದು ಶಬ್ದಗಳಾಚೆ ಬೆಳೆದ ವ್ಯಕ್ತಿತ್ವ. ಅವರು ಶಬ್ದಾತೀತರು ಮತ್ತು ಸೀಮಾತೀತರು!! ನಿಯಮ-ನಿಷ್ಠೆಗಳನ್ನು, ಅಪ್ಪಾವರಣ ಪ್ರೇಮವನ್ನು, ಅನುಭವ ಮತ್ತು ಅನುಭಾವಗಳನ್ನು ಅವರಿಂದ ಕೇಳಿ ತಿಳಿಯಬೇಕು ಮತ್ತು ಅವರನ್ನು ನೋಡಿ ಕಲಿಯಬೇಕು. ಶುಷ್ಕ ವೈಚಾರಿಕತೆಯ ಕುಷ್ಠರೋಗಕ್ಕೆ ಬಲಿಯಾಗಿ ಜನಮನಗಳಲ್ಲಿ ತುಂಬಿಕೊಂಡಿರುವ ಭಕ್ತಿ, ಭಾವನೆಗಳನ್ನು ಹತ್ತಿಕ್ಕುವ ಮತ್ತು ಕದಡುವ ಪ್ರಯತ್ನದಲ್ಲಿ ತೊಡಗಿಕೊಂಡಿರುವ ಮತ್ತು ತನ್ಮೂಲಕ ಗುರುತಿಸಿಕೊಳ್ಳ ಬಯಸುವ ಆಷಾಢಭೂತಿಗಳನ್ನು ಕಂಡು ಪೂಜ್ಯರಿಗೆ ಸುತರಾಂ ಆಗುತ್ತಿರಲಿಲ್ಲ. ಅಂಥವರ ಮಾತುಗಳಿಗೆ ಅವರು ಕಿವಿಯಾಗುವುದಿಲ್ಲ ಮತ್ತು ಅಂಥವರ ಮೋಡಿಗೆ ಅವರು ಕಣ್ಣಾಗುವುದಿಲ್ಲ. ಅಂಥವರ ವಿಷಯದಲ್ಲಿ ಅವರು 'ದಿವ್ಯ ಜಿಗುಪ್ಸೆ'ಯನ್ನು ತಳೆದುಕೊಂಡಿದ್ದರು.

ಪ್ರಸ್ತುತ ವ್ಯವಸ್ಥೆಯ ಬಗ್ಗೆ ಪರಮಪೂಜ್ಯರಲ್ಲಿ ತೀವ್ರತರವಾದ ಜಿಗುಪ್ಸೆ ಇತ್ತು. ಜಗತ್ತು ಯಾವ ದಿಶೆಯಲ್ಲಿ ಓಡುತ್ತಿದೆ ಮತ್ತು ಅದೆಷ್ಟೊಂದು ಪ್ರಮಾಣದಲ್ಲಿ ಭ್ರಷ್ಟಗೊಂಡಿದೆ ಎಂಬುವುದು ಅವರಿಗೆ ಚೆನ್ನಾಗಿ ಗೊತ್ತಿತ್ತು. 'ವ್ಯಕ್ತಿತ್ವ'ಗಳು ಬಣ್ಣಗಳಾಗಿ ಹರಿದುಹೋಗುತ್ತಿರುವುದು ಮತ್ತು ಬಣಗಳಾಗಿ ಒಡೆದುಹೋಗುತ್ತಿರುವುದನ್ನು ಕಂಡು ಅವರ ಮನಸ್ಸು ಕೊರಗುತ್ತಿತ್ತು, ಮರಗುತ್ತಿತ್ತು. ಆದರೂ ಅದರೊಳಗಿನ ಆ 'ಒಳಗು' ಮತ್ತು 'ಬೆಳಗು' ಕತ್ತಲೆಯ ಮಧ್ಯದಲ್ಲಿಯೂ ಬೆಳಕನ್ನು ಹುಡುಕುವ ನಿರಂತರ ಪ್ರಯತ್ನದಲ್ಲಿ ತೊಡಗಿಕೊಂಡಿದೆ. 'ದೀಪದಂತೆ ಬೆಳಗು'ತ್ತಿದ್ದ ವ್ಯಕ್ತಿತ್ವಗಳು ಇಂದು 'ದ್ವೀಪವಾಗಿ ಮುಳಗಿಹೋಗು'ತ್ತಿರುವುದನ್ನು ಕಂಡು ಅವರ ಅಂತಃಕರಣ 'ಅಯ್ಯೋ ಪಾಪ' ಎನ್ನುತ್ತಿತ್ತು. ಕತ್ತಲೆಯ ಮೃತ್ಯುವಿನ ಮಧ್ಯದಲ್ಲಿ ಬೆಳಕನ್ನು, ಅಜ್ಞಾನದ ಮಧ್ಯದಲ್ಲಿ ಜ್ಞಾನವನ್ನು, ರಸವನ್ನು, ವಿಷಮತೆಯ ಮಧ್ಯದಲ್ಲಿ ಅಮೃತವನ್ನು, ಕಸದ ಮಧ್ಯದಲ್ಲಿ ಸಮತೆಯನ್ನು,



ಸಂತೆಯ ಮಧ್ಯದಲ್ಲಿ ನಿಶ್ಚಿಂತೆಯನ್ನು, ವಿರಸದ ಮಧ್ಯದಲ್ಲಿ 'ಸರಸ-ಸಮರ'ಸವನ್ನು ಗ್ರಹಿಸುವ ಮಹಾನುಭಾವ ಮಾತ್ರ ಇಂದು ನೆಮ್ಮದಿಯಿಂದ ಬಾಳಬಲ್ಲ, ಬದುಕಬಲ್ಲ. ಪರಮಪೂಜ್ಯರು ಅಂಥ ಅರ್ಥಪೂರ್ಣ ಬದುಕನ್ನು ತಮ್ಮದಾಗಿಸಿಕೊಂಡಿದ್ದರು. ತಪ್ಪು-ಸರಿಗಳೆರಡನ್ನು ಸಹಿಸಿಕೊಂಡು ಬದುಕಿದ ಹಿರಿಯ ಜೀವ ಅವರದು!!

ಅವರು ಸಾರ್ಥಕ ಶತಾಯುಷಿಗಳು. ಪರಮಪೂಜ್ಯರಲ್ಲಿ ಕ್ರಿಯಾಶೀಲತೆಯನ್ನು ಕಂಡಾಗ ಪರಮಪೂಜ್ಯರು ವಯಸ್ಸಿನೊಂದಿಗೆ ಸಾಗುತ್ತಿಲ್ಲ. ವಯಸ್ಸೇ ಅವರ ಒಲವು-ನಿಲವುಗಳನ್ನು ಅರಿತುಕೊಂಡು ಅವರನ್ನನುಸರಿಕೊಂಡು ಸಾಗುತ್ತಿತ್ತು ಎಂದೆನಿಸದೆ ಇರದು. ಅವರೊಂದು ಭಕ್ತರ ಬಾಳ-ಬಾಂದಳದಲ್ಲಿ ನಿರಂತರವಾಗಿ ಮಿನುಗುವ ಧ್ರುವ ನಕ್ಷತ್ರ. ಅವರ ಸಾಧನೆಯ ಮುಂದೆ ಎಷ್ಟೇ ಉನ್ನತೋನ್ನತ ಮತ್ತು ಉತ್ತಮೋತ್ತಮ ತಲೆಗಳಾದರೂ ಸರಿ, ಅವು ಬಾಗಿ ನಿಂತುಕೊಳ್ಳದೆ ಇರಲಾರವು. ಬರೀ ಪ್ರಧಾನಿ, ಉಪಪ್ರಧಾನಿ, ರಾಷ್ಟ್ರಪತಿ, ಉಪರಾಷ್ಟ್ರಪತಿಗಳಷ್ಟೇ ಅಲ್ಲ. 'ಭಾರತ ರತ್ನ'ಗಳು ಕೂಡ ಅವರ ಮುಂದೆ ತಲೆಬಾಗಿ ಮತ್ತು ಕೈ ಮುಗಿದು ನಿಂತುಕೊಳ್ಳಬೇಕು. ಅದು ಪರಮಪೂಜ್ಯರು ಬೆಳೆದ ಎತ್ತರ!!

ಕೊನೆಯಲ್ಲೊಂದು ಮಾತು. ಸಂಸ್ಕೃತ ಸಾರಸ್ವತ ಲೋಕದ ದಿಗ್ಗಜರ ಕುರಿತು ಕವಿಯೊಬ್ಬ ಹೇಳಿದ್ದಾನೆ.

**ಉಪಮಾ ಕಾಲಿದಾಸಸ್ಯ ಭಾರವೇರರ್ಥ ಗೌರವಮ್ ।**
**ದಂಡಿನಃ ಪದಲಾಲಿತ್ಯಂ ಮಾಘೇ ಸಂತಿ ತ್ರಯೋ ಗುಣಾಃ॥**

ಅದೇ ರೀತಿ ಈ ಪ್ರಪಂಚದಲ್ಲಿ ಎಲ್ಲಿಯೇ ನಿಂತಾದರೂ ಸರಿ, ದಾಸೋಹ'ವೆಂದರೆ ಸಾಕು, ಥಟ್ಟನೇ ಪರಮಪೂಜ್ಯರ ಪೂಜ್ಯ ನಾಮಧೇಯವು ಜ್ಞಾಪಕಕ್ಕೆ ಬರುತ್ತದೆ. ಅದೇ ರೀತಿ ತಪೋನಿಷ್ಠೆ ಮತ್ತು ಕಾಯಕ ನಿಷ್ಠೆಗೂ ಕೂಡ ಅವರೇ ಪರ್ಯಾಯ. ಕಾಯಕ, ದಾಸೋಹ ಮತ್ತು ತಪಸ್ಸು ಈ ಮೂರು ಗುಣಗಳು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳಲ್ಲಿ 'ತ್ರಿಮೂರ್ತಿ'ಗಳಂತೆ ಮತ್ತು 'ಪ್ರಸಾದ ತ್ರಯ'ಗಳಂತೆ ಮೇಳೈಸಿಕೊಂಡು ರಾರಾಜಿಸಿಕೊಂಡಿವೆ. ಅವರ ಭವ್ಯ ದಿವ್ಯ ಮತ್ತು ದಿವ್ಯ ಭವ್ಯ 'ಮಹಾಮೇರು ವ್ಯಕ್ತಿತ್ವ'ಕ್ಕೆ ಪ್ರೀತ್ಯಭಿಮಾನಗಳಿಂದ, ಭಕ್ತಿಯಿಂದ 'ಗೌರವ ಗುಚ್ಛ'ವನ್ನು ಅರ್ಪಿಸೋಣಾ !

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದೀರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು **ಸಿದ್ಧಗಂಗಾ ಮಾಸಪತ್ರಿಕೆ** ಹೆಸರಿನಲ್ಲಿ **ನಗದು/ಚೆಕ್/ಡಿ.ಡಿ.** ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (ಐಒ) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಾರ್ಡಿನಲ್ಲಿ ಬರೆದು ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ. ವಾರ್ಷಿಕ ಚಂದಾದಾರರು ತಮ್ಮ ಸದಸ್ಯತ್ವದ ಅವಧಿ ಮುಗಿದಿದ್ದರೆ ನವೀಕರಿಸಿಕೊಳ್ಳಬೇಕೆಂದು ಕೋರುತ್ತೇವೆ.

**ಪ್ರಕಾಶಕರು,**
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪.
ದೂರವಾಣಿ : ೦೮೧೬-೨೨೮೨೫೨೨

ಸ್ಮರಣೆ

# ಮಹಾಮಾನವತಾವಾದಿ

– ಪ್ರೊ. ವ್ಹಿ.ವ್ಹಿ. ಸಂಗಮದ *

ಭೂಮಿಯ ಮೇಲೆ ಮಾನವನು ದೇವರ ಶಾಪವಾಗಿ ಬಂದಿಲ್ಲ. ವರವಾಗಿ ಬಂದಿದ್ದಾನೆ. (Man is not a curse of god, but gift of god on earth). ಪೌರಾಣಿಕ ಕಲ್ಪನೆಯಂತೆ ಮಾನವನು ಕರ್ಮ ಫಲವಾಗಿಯೋ ಅಥವಾ ದೇವರ ಶಾಪದಿಂದಲೋ ಭೂಮಿಯ ಮೇಲೆ ಹುಟ್ಟಿ ಬರುತ್ತಾನೆ. ಆದರೆ ಶರಣರ ದೃಷ್ಟಿಯಲ್ಲಿ ಮಾನವನು ದೇವರ ವರವಾಗಿ ಬರುತ್ತಾನೆ. ಅಷ್ಟೇ ಅಲ್ಲ ಅಂತಿಮವಾಗಿ ಮಾನವನು ದೇವರೆ ಆಗಿದ್ದಾನೆ. ಇದಕ್ಕೆ ಸಾಕ್ಷಿ ಎಂಬಂತೆ ನಮ್ಮ ಮಧ್ಯದಲ್ಲಿ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳಿದ್ದರು. ಶ್ರೀಗಳನ್ನು ನಡೆದಾಡುವ ದೇವರೆಂದೇ ಜನ ಭಾವಿಸಿದ್ದಾರೆ. ಇದು ವಾಸ್ತವಿಕವಾಗಿ ಕಂಡು ಬರುವ ಸತ್ಯ.

ಗಾಂಧಿಜೀಗೆ ಅವರ ತಾಯಿ ಪುತಳಿಬಾಯಿಯವರು ಅಂಗಡಿಗೆ ಹೋಗಿ ಕಡ್ಡಿಪೆಟ್ಟಿಗೆ ತರಲು ಹೇಳಿದರು. ಆಗ ಬಾಲಕರಾಗಿದ್ದ ಗಾಂಧೀಜಿ ಕತ್ತಲಾಗಿದೆ; ಹೆದರಿಕೆ ಬರುತ್ತದೆ ಎಂದು ಉತ್ತರಿಸಿದರು. ಆಗ ಅವರ ತಾಯಿ ರಾಮನಾಮವನ್ನು ಜಪಿಸುತ್ತಾ ಹೋಗು, ರಾಮನಾಮಕ್ಕೆ ಕತ್ತಲು ಹೆದರುತ್ತದೆ. ಅದರಂತೆ ಬಾಲಕ ಗಾಂಧೀಜಿ ರಾಮನಾಮವನ್ನು ಜಪಿಸಲು ಪ್ರಾರಂಭಿಸಿದರು. ಹೀಗೆ ಬಾಲಕ ಗಾಂಧೀಜಿಯ ಮನಸ್ಸಿನಲ್ಲಿ ಅವರ ತಾಯಿ ರಾಮನಾಮವನ್ನು ಬಿತ್ತಿದರು. ಅದೇ ಅವರಿಗೆ ಮುಂದೆ ರಕ್ಷಾ (ತಾರಕ) ಮಂತ್ರವಾಯಿತು. ಇದನ್ನೇ ೧೨ನೇ ಶತಮಾನದಲ್ಲಿ ಬಸವಣ್ಣನವರು ಪರ್ಯಾಯವಾಗಿ ಈ ವಚನದಲ್ಲಿ ಪ್ರಸ್ತುತಪಡಿಸುತ್ತಾರೆ. ಆ ಮಾತು ಈ ಕೆಳಗಿನಂತಿದೆ.

'ಕರಿಘನ, ಅಂಕುಶ ಕಿರಿದೆ'ನ್ನಬಹುದೆ ? ಬಾರದಯ್ಯ,
'ಗಿರಿಘನ, ವಜ್ರ ಕಿರಿದೆ'ನ್ನಬಹುದೆ ? ಬಾರದಯ್ಯ,
'ತಮಂದ ಘನ, ಜ್ಯೋತಿ ಕಿರಿದೆ'ನ್ನಬಹುದೆ ? ಬಾರದಯ್ಯ,
'ಮರಹು ಘನ, ನಿಮ್ಮ ನೆನೆವ ಮನ ಕಿರಿದೆ'ನ್ನ ಬಹುದೆ ?
ಬಾರದಯ್ಯಾ ಕೂಡಲಸಂಗಮದೇವಾ.

ಇದೇ ಅರ್ಥ ಬರುವ ಬಸವಣ್ಣನವರ ಇನ್ನೊಂದು ವಚನದಲ್ಲಿ ಪರ್ಯಾಯವಾಗಿ ಈ ಕೆಳಗಿನಂತೆ ಹೇಳಿದ್ದಾರೆ.

ಕರಿಯಂಜುವುದು ಅಂಕುಶಕಯ್ಯ,
ಗಿರಿಯಂಜುವುದು ಕುಲಿಶಕ್ಕಯ್ಯಾ,
ತಮಂಧವಂಜುವುದು ಜ್ಯೋತಿಗಯ್ಯಾ,
ಕಾನನವಂಜುವುದು ಬೇಗೆಗೆಯ್ಯಾ,
ಪಂಚಮಹಾಪಾತಕ ವಂಜುವುದು
ಕೂಡಲ ಸಂಗನ ನಾಮಕ್ಕಯ್ಯಾ.

ಈ ಮೇಲಿನ ಎರಡು ವಚನಗಳಲ್ಲಿ ಬಸವಣ್ಣನವರು ಮಾಯ, ಪಂಚಮಹಾಪಾತಕ ಕುರಿತು ಒಂದು ರೀತಿಯ ಸ್ಪಷ್ಟ ನಿಲುವನ್ನು ತಿಳಿಯಪಡಿಸಿದ್ದಾರೆ. ಮಾಯ ಮತ್ತು ಪಂಚಮಹಾಪಾತಕಗಳು (Great sins, hineous crime), ಮಾನವನ ಜೀವನದ ಅತ್ಯಂತ ಅಪಾಯಕಾರಿ ಶತ್ರುಗಳು. ಮಾಯೆ ಅಂದರೆ ಅಜ್ಞಾನ. ಪಂಚ ಮಹಾಪಾತಕಗಳನ್ನು ಕುರಿತು ಬಸವಣ್ಣನವರು, ಚನ್ನಬಸವಣ್ಣನವರು, ಜೇಡರ ದಾಸಿಮಯ್ಯನವರು, ಸಿದ್ಧರಾಮೇಶ್ವರರು ಮುಂತಾದ ಶಿವಶರಣರು ಬೇರೆ ಬೇರೆಯಾಗಿಯೇ ತಮ್ಮ ವಚನಗಳಲ್ಲಿ ಅರ್ಥೈಯಿಸುತ್ತಾರೆ. ಇವರೆಲ್ಲರ ಅಭಿಪ್ರಾಯಗಳನ್ನು ಕ್ರೋಡೀಕರಿಸಿ ಹೀಗೆ ಹೇಳಬಹುದು. ೧. ಪರಧನ, ೨. ಪರಸ್ತ್ರೀ, ೩. ಪರದೈವ, ೪. ಪರನಿಂದೆ, ೫. ಪರಹಿಂಸೆ – ಈ ಮೌಲಿಕ ಅಪರಾಧಿ ಪ್ರವೃತ್ತಿಗಳನ್ನು ಗೆಲ್ಲಲು ಮಾನವನು ದೇವರ ಗುಣಗಾನ (ಸ್ತೋತ್ರ) ಧ್ಯಾನ, ಹಾಗೂ ಸತ್‌ಕ್ರಿಯೆ ಮೂಲಕ ಸಾಗುತ್ತಾನೆ. ಈ ಪ್ರಕ್ರಿಯೆಯನ್ನು ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ಜೀವನದಲ್ಲಿ ದಿನದ ೨೪ ಗಂಟೆಗಳ ಕಾಲವು ನಡೆಯುವುದನ್ನು ನೋಡ ಬಹುದಾಗಿತ್ತು. ಇದು ಅತಿಶಯೋಕ್ತಿ ಅಲ್ಲ. ವಾಸ್ತವಿಕ ಮಾತು. ಇದು ಅವರ ಹೊಗಳಿಕೆ ಅಲ್ಲ. ಅವರನ್ನು ಕುರಿತು ಹೇಳುವ ಸತ್ಯ ಸಂಗತಿ.

* ರಾಣೇಬೆನ್ನೂರು – ೫೮೧ ೧೧೫



## ಧಾರ್ಮಿಕ ಪರಂಪರೆ

ತತ್ವಜ್ಞಾನವು ದೇವರು ಹಾಗೂ ನೀತಿಯನ್ನು ಕುರಿತು ಹೇಳುವ ಮಾತನ್ನು ಧರ್ಮವು ಆಚರಿಸಿ ತೋರಿಸಬೇಕಾಗಿದೆ. ಹೀಗಾಗಿ ಧರ್ಮವನ್ನು ಕುರಿತು ಹಿಂದೂ ಧರ್ಮದಲ್ಲಿ "ಕೆಳಗೆ ಬಿದ್ದವರನ್ನು ಬೀಳುವವ ರನ್ನು, ಬೀಳಬಹುದಾದವರನ್ನು" ಮೇಲೆತ್ತುವುದೇ ಧರ್ಮವೆಂಬ ವ್ಯಾಖ್ಯಾನವಿದೆ. ಈ ವ್ಯಾಖ್ಯಾನಕ್ಕೆ ವ್ಯಾಖ್ಯಾನದಂತಿದ್ದರು ಶ್ರೀ ಸಿದ್ಧಗಂಗಾ ಶ್ರೀಗಳು.

ವೈಜ್ಞಾನಿಕ ಹಾಗೂ ವೈಚಾರಿಕ ಪ್ರಗತಿಯಿಂದ ಮನುಷ್ಯನಲ್ಲಿ ದೇವರು ಹಾಗೂ ಧರ್ಮದಲ್ಲಿ ಶ್ರದ್ಧೆ ಅಳಿಸುತ್ತಾ ಹೋಗುತ್ತಲಿದೆ. ಹೀಗಾಗಿ ಧರ್ಮದ ಮತ್ತು ಸನ್ಯಾಸಿಗಳ ವ್ಯವಸ್ಥೆಯು ಹದಗೆಟ್ಟಿದೆ. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಧರ್ಮವನ್ನು ಮಾನವೀಯತೆಯ ಅಡಿಗಲ್ಲನ್ನಾಗಿ ಮಾಡಿ ಪರಿವರ್ತಿಸಿದವರು ಸಿದ್ಧಗಂಗೆ ಶ್ರೀಗಳವರು. ಧರ್ಮವು ಜಾತಿಯಲ್ಲ, ಕಂದಾಚಾರವಲ್ಲ, ಅಂಧ ಪರಂಪರೆಯಲ್ಲ ಎಂಬುದನ್ನು ಶ್ರೀಗಳವರು ನಿಚ್ಛಳವಾಗಿ ಆಚರಿಸಿ ತೋರಿಸಿದರು. ಧರ್ಮವು ಮಾನವೀಯತೆಯ ಹಾಗೂ ನೈತಿಕ ಮೌಲ್ಯಗಳಿಗೆ ಹಿಡಿದ ಕನ್ನಡಿಯಂತಿರಬೇಕು. ಈ ಮಾತು ಶ್ರೀಗಳವರ ಜೀವನದಲ್ಲಿ ಕನ್ನಡಿಯಂತೆ ಸ್ಪಷ್ಟವಾಗಿತ್ತು.

ಸನ್ಯಾಸವು ವರ್ಣಾಶ್ರಮ ಪ್ರಣೀತವಾದದ್ದು. ವಿರಕ್ತಿಯ ಷಟ್‌ಸ್ಥಲ ಪ್ರಣೀತವಾದದ್ದು. ವಿರಕ್ತಿಯು ರಕ್ತ ವ್ಯಾಮೋಹವನ್ನು ತ್ಯಜಿಸುವುದಾಗಿದೆ. ಒಂದರ್ಥದಲ್ಲಿ ದೇಹ ಇಂದ್ರಿಯಗಳ ದೌರ್ಬಲ್ಯದ ಬಯಕೆಗಳೇ ರಕ್ತ ವ್ಯಾಮೋಹವೆಂದು ಹೇಳಬಹುದು. ಈ ಬಯಕೆಗಳನ್ನು ಮೆಟ್ಟಿ ನಿಲ್ಲುವುದೇ ವಿರಕ್ತಿಯಾಗಿದೆ. ಅಂತವನೇ ವಿರಕ್ತನಾಗುತ್ತಾನೆ. ಇಂಥಹ ವಿರಕ್ತ ಪರಂಪರೆಗೆ ಜೀವಂತವಾಗಿ ಶ್ರೀಗಳು ಬದುಕುತ್ತಿದ್ದಾರೆ.

ಲಿಂಗವಂತ ಅಥವಾ ವೀರಶೈವ ಪರಂಪರೆಯಲ್ಲಿ ಅಷ್ಟಾವರಣದಲ್ಲಿಯ ಗುರು ಹಾಗೂ ಜಂಗಮನ ಕರ್ತವ್ಯಗಳನ್ನು ನೇರವೇರಿಸುವ ಮಠಾಧೀಶರ ವರ್ಗೀಕರಣ ಜಾರಿಯಲ್ಲಿದೆ. ಅವರನ್ನು ಗುರು ವರ್ಗ, ವಿರಕ್ತ ವರ್ಗವೆಂದು ಗುರುತಿಸುತ್ತಾ ಬಂದಿದ್ದಾರೆ.

ಬಸವಣ್ಣನವರಿಂದ ಪ್ರಾರಂಭವಾದ ವಿರಕ್ತ ಪರಂಪರೆಯು ಅನುಭವ ಜನ್ಯವಾದುದು. ಸನ್ಯಾಸ ಪರಂಪರೆಯಂತೆ ಜಾತಿ ಅಥವಾ ಆಶ್ರಮ ಜನ್ಯವಲ್ಲ. ಈ ವಿರಕ್ತ ಪರಂಪರೆಯು ವೈರಾಗ್ಯದ ಮೇಲೆ ನಿಂತಿದೆ. ಇಂಥಹ ವೈರಾಗ್ಯದ ಪ್ರತೀಕವಾಗಿ ಶ್ರೀಗಳವರು ನಮ್ಮ ಮಧ್ಯದಲ್ಲಿ ಉದಾಹರಣೆಯಾಗಿ ನಿಂತಿದ್ದಾರೆ.

## ದಾಸೋಹ

"ಬಸವಣ್ಣನವರ ಭಕ್ತಿಯನ್ನು ಹೈದರಾಬಾದ ಕರ್ನಾಟಕದವರು, ಜ್ಞಾನವನ್ನು ಉತ್ತರ ಕರ್ನಾಟಕದವರು, ದಾಸೋಹವನ್ನು ದಕ್ಷಿಣ ಕರ್ನಾಟಕದವರು ಹಂಚಿಕೊಂಡಿದ್ದಾರೆ." ಈ ಮಾತು ಐತಿಹಾಸಿಕವಾಗಿ ಸತ್ಯವಾದುದು. ಲಿಂ: ಭಾಲ್ಕಿ ಚನ್ನಬಸವ ಪಟ್ಟದೇವರ ಕಾರ್ಯಕಲಾಪಗಳಲ್ಲಿ ಬಸವಣ್ಣನವರ ಭಕ್ತಿಯನ್ನು ಕಾಣಬಹುದು. ಉತ್ತರ ಕರ್ನಾಟಕವು ಡಾ॥ ಫ.ಗು. ಹಳಕಟ್ಟಿಯವರ ಮೂಲಕ ಹಾಗೂ ಕರ್ನಾಟಕ ವಿಶ್ವವಿದ್ಯಾಲಯದ ಮೂಲಕ ಹೆಚ್ಚಿನ ವಚನ ಸಾಹಿತ್ಯವನ್ನು ಪ್ರಕಟಿಸಿ, ಬಸವಣ್ಣನವರ ಜ್ಞಾನವನ್ನು ಹಂಚಿಕೊಂಡಿದೆ. ದಕ್ಷಿಣ ಕರ್ನಾಟಕದಲ್ಲಿ ಸಿದ್ಧಗಂಗೆ ಶ್ರೀಗಳು ಬಸವಣ್ಣನವರ ದಾಸೋಹದ ನಂದಾದೀವಿಗೆಯನ್ನು ಹಚ್ಚಿದ್ದಾರೆ. ದೇವನೂರು ಗುರುಮಲ್ಲೇಶ್ವರ ಮಠ, ಸುತ್ತೂರು ಶಿವರಾತ್ರೇಶ್ವರ ಮಠ, ಸಿದ್ಧಗಂಗೆ ಮಠಗಳು ದಕ್ಷಿಣ ಕರ್ನಾಟಕದಲ್ಲಿ ದಾಸೋಹಕ್ಕಾಗಿ ಪ್ರಸಿದ್ಧವಾಗಿವೆ. ಮಧ್ಯ ಕರ್ನಾಟಕದಲ್ಲಿ ಚಿತ್ರದುರ್ಗ ಹಾಗೂ ಸಿರಿಗೆರೆ ಬೃಹನ್ಮಠಗಳು ದಾಸೋಹವನ್ನು ನಡೆಸಿಕೊಂಡು ಬರುತ್ತಿದೆ. ಗದಗಿನ ತೋಂಟದಾರ್ಯ ಮಠ ಮುಂಡರಗಿ, ಹಾಲ್ಕೇರಿ ಮಠಗಳು, ಪಂಚಪೀಠದ ಮಠಗಳು ಮತ್ತು ಸದ್ಭಕ್ತರ ಮನೆಗಳಲ್ಲಿ ದಾಸೋಹ ಅನುಚಾನವಾಗಿ ನಡೆದು ಬಂದಿದೆ. ಇದು ಹೆಮ್ಮೆಯ ವಿಷಯವೂ ಆಗಿದೆ. ಐತಿಹಾಸಿಕವಾಗಿ ಇವರಲ್ಲಿ ಯಾರೂ ಮೊದಲು, ಯಾರೂ





ನಂತರ ಎಂಬುದು ನನಗೆ ನಿಶ್ಚಿತವಾಗಿ ತಿಳಿದು ಬಂದಿಲ್ಲ. ಅದೇ ರೀತಿ ಉತ್ತರ ಕರ್ನಾಟಕದಲ್ಲಿ ಧಾರವಾಡದ ಶ್ರೀ ಮುರುಘಾ ಮಠ, ಬೆಳಗಾವಿಯ ನಾಗನೂರು ಮಠ, ಹುಬ್ಬಳ್ಳಿಯ ಮೂರುಸಾವಿರ ಮಠ ಮುಂತಾದ ವಿರಕ್ತ ಮಠಗಳು ದಾಸೋಹವನ್ನು ಮಾಡುತ್ತಿವೆ. ಆದರೆ ಈ ಮಠಗಳು ದಕ್ಷಿಣ ಕರ್ನಾಟಕದ ಮಠಗಳಂತೆ ಜಾತ್ಯಾತೀತವಾಗಿ ದಾಸೋಹ ಮಾಡುವುದಿಲ್ಲ ಎಂದು ಹೇಳಬಹುದು.

### ಜಾಗತಿಕ ಅಚ್ಚರಿ

ಸಿದ್ಧಗಂಗೆ ಶ್ರೀಗಳ ದಾಸೋಹವು ಜಾತ್ಯತೀತವಾದುದು. ಇಡೀ ಕರ್ನಾಟಕದಲ್ಲಿ, ಇಡೀ ಭಾರತದಲ್ಲಿ ಜಾತ್ಯತೀತವಾಗಿ ದಾಸೋಹವನ್ನು ಪ್ರಾರಂಭಿಸಿದವರು ಸಿದ್ಧಗಂಗೆ ಶ್ರೀಗಳೇ ಪ್ರಮುಖರು. ಜಗತ್ತು ದೇವರ ಲೀಲೆ ಎಂದು ಹೇಳುತ್ತಾರೆ. ಅದೇ ರೀತಿ ದಾಸೋಹವು ಸಿದ್ಧಗಂಗೆ ಶ್ರೀಗಳ ಲೀಲೆಯಾಗಿದೆ ಎಂದು ಹೇಳಿದರೆ ಅಚ್ಚರಿಪಡಬೇಕಾಗಿಲ್ಲ. ದಿನಾಲು ಎಂಟು ಸಾವಿರಕ್ಕೂ ಮೇಲ್ಪಟ್ಟು ಜನರ ದಾಸೋಹವನ್ನು ನಡೆಸುವುದು ಹುಡುಗಾಟದ ಮಾತಲ್ಲ. ಇದು ಅವರ ಆತ್ಮ ಬಲಕ್ಕೆ ಸಾಕ್ಷಿಯಾಗಿ ನಿಂತಿದೆ. ಇದೊಂದು ಜಾಗತಿಕ ಅಚ್ಚರಿ (Globle wonder) ಎಂದೇ ಹೇಳಬೇಕಾಗುತ್ತದೆ. ಇಲ್ಲಿ ದಾಸೋಹವೆಂದರೆ ಅನ್ನ ಸಂತರ್ಪಣೆ ಎಂದೂ ಅರ್ಥ ಮಾಡಬಹುದು.

### ಶಿಕ್ಷಣ

ಇಂದು ಶಿಕ್ಷಣವು ಸೇವೆಯಾಗದೇ ವ್ಯಾಪಾರ ವಾಗಿದೆ. ಸಿದ್ಧಗಂಗೆ ಶ್ರೀಗಳು ಶಿಕ್ಷಣವನ್ನು ಒಬ್ಬ ಪಾದ್ರಿಯ ಶ್ರದ್ಧೆಯಂತೆ ನಡೆಸಿಕೊಂಡು ಬರುತ್ತಿದ್ದರು. ಸರಕಾರದ ಅನುದಾನಕ್ಕಾಗಿ ಅವರು ಶಿಕ್ಷಣ ಸಂಸ್ಥೆಯನ್ನು ನಡೆಸುತ್ತಿಲ್ಲ. ಒಮ್ಮೆ ಸರಕಾರದ ಅನುದಾನವನ್ನು ಹಿಂದಿರುಗಿಸಿದ್ದುಂಟು. ಒಬ್ಬ ಪವಿತ್ರ ಶಿಕ್ಷಕನಂತೆ ಅವರು ಪ್ರತಿ ನಿತ್ಯವು ಪಾಠ ಹೇಳುತ್ತಿದ್ದರು. ಇದು ಅವರ ಶಿಕ್ಷಣದ ಉಸಿರಾಗಿತ್ತು..

### ಪವಿತ್ರ ಆಶ್ರಮ

ಅವರು ನಡೆಸುವ ಶಿಕ್ಷಣ ಸಂಸ್ಥೆಗಳು ಅರ್ಧ ಶತಮಾನದಷ್ಟು ಹೆಚ್ಚು ಕಾಲ ಇಂದಿಗೂ ಮಾದರಿಯಾಗಿ ನಿಂತಿವೆ. ಅವರು ಶಿಕ್ಷಣವನ್ನು ಸಾಮಾಜಿಕ ಜೀವನದ ಬೆನ್ನೆಲುಬು ಎಂದು ಭಾವಿಸಿದ್ದರು. ಅವರ ಶಿಕ್ಷಣ ಸಂಸ್ಥೆಗಳು ಪವಿತ್ರ ಆಶ್ರಮಗಳಂತೆ ಬೆಳೆದು ಬಂದಿದೆ. ಅವರ ಶಿಕ್ಷಣ ಸ್ವರೂಪವು ಕೇವಲ ಶ್ರೀಮಂತರ ಹಾಗೂ ಬುದ್ಧಿವಂತರ ವಿದ್ಯಾ ಕೇಂದ್ರಗಳಾಗಿಲ್ಲ. ಸಾಮಾನ್ಯರ ಕಲಿಕಾ ಕೇಂದ್ರಗಳಾಗಿವೆ. (Seats of Social Education) ಶಿಕ್ಷಣವನ್ನು ವಿಶೇಷರಿಗಾಗಿ ಮೀಸಲಾಗಿಡದೇ ಸಾಮಾನ್ಯರಿಗೆ ತೆರೆದಿಟ್ಟವರಾಗಿದ್ದಾರೆ. ಹೀಗೆ ಶಿಕ್ಷಣದ ಮೈಲುಗಲ್ಲನ್ನು ನಿರ್ಮಿಸಿದ್ದಾರೆ.

### ಸಾಂಸ್ಕೃತಿಕ ಹಬ್ಬ

ಶ್ರೀಗಳು ನಡೆಸಿಕೊಂಡು ಬರುತ್ತಿರುವ ಗ್ರಾಮಾಂತರ ಬಸವ ಜಯಂತಿ ಕಾರ್ಯಕ್ರಮಗಳು ಸಾಂಸ್ಕೃತಿಕ ಹಬ್ಬವಾಗಿವೆ. ಆ ದಿನ ೨೪ ಘಂಟೆಗಳ ಕಾಲ ಉಪನ್ಯಾಸಗಳು, ವಿಚಾರ ಸಂಕೀರಣ, ಇಡೀ ರಾತ್ರಿ ಬಸವಣ್ಣನವರ ನಾಟಕವು ಸಾಂಸ್ಕೃತಿಕ ಹಬ್ಬವಾಗಿದೆ. ವಚನ ಸಂಗೀತದ ಮೂಲಕ ನಾಟಕದಲ್ಲಿ ಬಸವಣ್ಣನವರನ್ನು ಗ್ರಾಮಾಂತರ ಜನತೆಗೆ ಬಹಳ ಅರ್ಥಪೂರ್ಣವಾಗಿ ಪರಿಚಯಿಸುತ್ತಾರೆ. ಇವರ ಗ್ರಾಮಾಂತರ ಬಸವ ಜಯಂತಿ ಕಾರ್ಯಕ್ರಮವು ಇಡೀ ಕರ್ನಾಟಕದಲ್ಲಿ ಅದ್ವಿತೀಯವಾಗಿದೆ. ಜನಮಾನಸದಲ್ಲಿ ಬಸವಣ್ಣನವರನ್ನು ಅಚ್ಚಳಿಯದೇ ಒಡಮೂಡಿಸುತ್ತಾ ಬಂದಿದ್ದಾರೆ.

### ಮಾನವೀಯತೆಯ ಮೇರುಶಿಖರ

"ಸಕಲ ಜೀವರಾಶಿಗಳಿಗೆ ಲೇಸನೆ ಬಯಸು" ಎಂಬುದು ಬಸವಣ್ಣನವರ ಅಚಲ ಸಿದ್ಧಾಂತವಾಗಿತ್ತು. "ದಯವೇ ಧರ್ಮದ ಮೂಲವಯ್ಯಾ" ಮಾನವೀಯತೆಗೆ ನೀಡಿದ ಅಮರ ಸಂದೇಶವಾಗಿದೆ. ಇದು ಬಸವಣ್ಣನವರ ಜೀವ ಜೀವಳವಾಗಿದೆ. ಸಿದ್ಧಗಂಗೆ ಶ್ರೀಗಳು ಅಹಿಂಸೆಯ ಆರಾಧಕರಾಗಿದ್ದರು. ಮಾನವೀಯತೆಗಾಗಿ ಅವರ ಹೃದಯವು ಸದಾ ಮಿಡಿಯುತ್ತಿತ್ತು. ಹೀಗಾಗಿ ಮಾನವೀಯತೆಯ ಮತ್ತೊಂದು ಹೆಸರು ಸಿದ್ಧಗಂಗೆ ಶ್ರೀಗಳು ಎಂದರೆ ಅತಿಶಯೋಕ್ತಿಯಲ್ಲ.

#### ಶ್ರೀವಾಣಿ

ಕಾಯಕದಲ್ಲಿ ಮೇಲು ಕೀಳು ಎಂಬ ಭೇದಭಾವ ಇರಲಾರದು. ಕಾಯಕ ಜೀವನ ದೇವರ ಪೂಜೆಯಷ್ಟೆ ಪವಿತ್ರ ಅನ್ಯರ ಸಂಪತ್ತು ಕಸಕ್ಕೆ ಸಮಾನ ಎಂಬ ಶರಣರ ದೃಷ್ಟಿಬೇಕು. ಬಸವಣ್ಣನವರ ಕಾಯಕ ತತ್ತ್ವಾಚರಣೆಯಿಂದ ಕಲ್ಯಾಣರಾಜ್ಯ ನಿರ್ಮಾಣವಾಗಿತ್ತು. ಅದು ಮತ್ತೆ ಬರಬೇಕು.





## ಕರ್ನಾಟಕದ ಗಾಂಧಿ

# ಶರಣ ಹರ್ಡೇಕರ ಮಂಜಪ್ಪನವರು

– ಎಚ್.ಎಸ್. ಸಿದ್ಧಗಂಗಪ್ಪ *



ಒಮ್ಮೆ ಸಾಕ್ರೆಟಿಸ್ ಶಿಷ್ಯರನ್ನು ಕೇಳಿದ "ಜೀವನದ ಸಾರ್ಥಕ್ಯ ಯಾವುದರಲ್ಲಿದೆ? ಶಿಷ್ಯರೆಲ್ಲ ತಮಗೆ ತೋರಿದ ಉತ್ತರಗಳನ್ನು ನೀಡಿದರು. ಗುರುವಿಗೆ ಯಾವುದು ಸಮರ್ಪಕವೆನ್ನಿಸಲಿಲ್ಲ. ಆತ ಹೇಳಿದ "ಜೀವನದ ಸಾರ್ಥಕ್ಯ ಬದುಕಿನಲ್ಲಿಲ್ಲ, ಬದುಕಿನಾಚೆ ಇದೆ. ಸತ್ತ ಮೇಲೆ ಎಷ್ಟು ಜನರ ಹೃದಯಗಳಲ್ಲಿ ನಿಮ್ಮ ನೆನಪು ಹಸಿರಾಗಿರುತ್ತದೆಯೋ ಎಷ್ಟು ಜನ ನಿಮ್ಮನ್ನು ಕೃತಜ್ಞತೆಯಿಂದ ಸ್ಮರಿಸುತ್ತಾರೆಯೋ ಅದರಲ್ಲಿದೆ. ಆ ಸ್ಮರಣೆ ಬರುವುದು ನಿಮ್ಮ ಬದುಕಿನ ಮೌಲ್ಯಗಳಿಂದ."

ಬದುಕಿನಲ್ಲಿ ಘನತೆಯನ್ನು ನೀಡುವುದರೊಂದಿಗೆ ಸಾವಿನಲ್ಲಿಯೂ ಘನತೆ ತರುತ್ತದೆ. ಹಾಗೆ ಬದುಕಿ, ಸಾಧನೆಯ ಹೆಜ್ಜೆ ಗುರುತುಗಳನ್ನು ಮೂಡಿಸಿ ಆದರ್ಶಗಳನ್ನು ಬಿತ್ತಿ ಬೆಳೆದು ಮರೆಯಾದವರು ಕರ್ನಾಟಕದ ಗಾಂಧಿ ಎಂದೇ ಹೆಗ್ಗಳಿಕೆಗೆ ಪಾತ್ರರಾಗಿದ್ದ ಹರ್ಡೇಕರ್ ಮಂಜಪ್ಪ ಅವರಿಗೆ ನನ್ನ ಗೌರವಪೂರ್ವಕ ನಮನಗಳು.

"ಎದ್ದೇಳಬೇಕು ಹೀಗೆ ಸದ್ದುಗದ್ದಲವಿರದೆ
ಕನಸುಗಳ ಕಂಡರಿಸೆ, ಶುದ್ಧ ಮನಸಿಗೆ ಬುದ್ಧಿ
ಸದಾ ಬೆಂಬಲಿಸಿ ಹೃದಯ ಹಂಬಲದೊಳದ್ದಿ
ಆಕಾಶ ಗೋಪುರಕೆ ಭೂಮಿ ಗದ್ದುಗೆ ಎಂದೆ
ಸಂಕಲ್ಪದೊಳಗೆ ಸಂಕೇತ ಕರಗಿಸಿ, ಶರಣ
ಭಾವಕ್ಕೆ ಹೊಸರೆಕ್ಕೆ ಮುಟ್ಟು ನೀಲಾಂಗಣ."

ಶ್ರೀ ಹರ್ಡೇಕರ ಮಂಜಪ್ಪನವರ ಅಸಾಮಾನ್ಯ ವ್ಯಕ್ತಿತ್ವವನ್ನು ಆರು ಸಾಲುಗಳ ಕವನದಲ್ಲಿ ಪ್ರಸಿದ್ಧ ಕವಿ ಡಾ. ಚನ್ನವೀರ ಕಣವಿಯವರು ಕಟ್ಟಿಕೊಟ್ಟಿದ್ದಾರೆ. ಇಂಥವರ ಅಸಾಧಾರಣ ಸಾಧನೆ, ಆದರ್ಶಗಳು ಇಂದಿನ ತಲೆಮಾರಿಗೆ ದಾರಿದೀಪ. ಕ್ರಿಯಾಶೀಲತೆ, ಕರ್ತೃತ್ವಶಕ್ತಿ, ಸಕಾರಾತ್ಮಕ ಚಿಂತನೆ, ನಾಡು, ನುಡಿ, ದೇಶ, ಧರ್ಮದ ಬಗ್ಗೆ ಗೌರವ, ಕಳಕಳಿ, ಜನರಲ್ಲಿ ಅರಿವು ಮೂಡಿಸಬೇಕೆನ್ನುವ ತುಡಿತ ಇವೇ ಮೊದಲಾದ ಅಸಾಧಾರಣ ವ್ಯಕ್ತಿತ್ವದಿಂದ ಜನಮಾನಸದಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿದವರು ಬಿತ್ತಿದವರು ಹರ್ಡೇಕರ ಮಂಜಪ್ಪನವರು ಎಂದು ಹೇಳಲು ಅಭಿಮಾನವೆನಿಸುತ್ತದೆ. ಸಮಾಜದ ಒಳಿತಿಗಾಗಿ ಅವರು ಮಾಡಿದ ನಿಸ್ವಾರ್ಥ ಸೇವೆ ಅನನ್ಯವಾದುದು.

**ಜನನ-ಬಾಲ್ಯ** : ಫೆಬ್ರವರಿ ೧೮, ೧೮೮೬ ರಲ್ಲಿ ಇತಿಹಾಸ ಪ್ರಸಿದ್ಧವಾದ ಬನವಾಸಿಯಲ್ಲಿ ಬಡಕುಟುಂಬದಲ್ಲಿ ಜನಿಸಿದರು. ಕಿತ್ತು ತಿನ್ನುವ ಬಡತನವಿದ್ದರೂ, ತಂದೆ ತಾಯಿಗಳ ಪ್ರೀತಿ, ಮಮತೆಗೆ ಬಡತನವಿರಲಿಲ್ಲ. ಮಗುವಿನ ಆರೈಕೆ ಮಾಡುವಲ್ಲಿ ಬಡತನ ಅಡ್ಡಿಯಾಗಲಿಲ್ಲ. ಪ್ರಕೃತಿಯ ಮಡಿಲಲ್ಲಿ

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೬೫೮೭೧

ಸ್ವಚ್ಛಂದವಾಗಿ ನಲಿದಾಡುತ್ತಾ ಪ್ರಕೃತಿಯ ಆರಾಧಕರಾದರು. ಪ್ರಾಥಮಿಕ ಶಿಕ್ಷಣ ಬನವಾಸಿಯಲ್ಲಿ ಪ್ರಾರಂಭವಾದರೂ, ಅಲ್ಲಿ ಕಲಿಯಲು ಹೆಚ್ಚಿನ ಅನುಕೂಲ, ಸೂಕ್ತವಾತಾವರಣ ಇಲ್ಲದಿದ್ದರಿಂದ ಶಿರಸಿಯಲ್ಲಿದ್ದ ಅವರ ಅಣ್ಣ ಮಧುಲಿಂಗಪ್ಪನವರ ಆಶ್ರಯಕ್ಕೆ ಬಂದರು. ಅವರ ಅಣ್ಣ ಶಿರಸಿ ತಾಲ್ಲೂಕು ಕಛೇರಿಯಲ್ಲಿ ಗುಮಾಸ್ತರಾಗಿದ್ದರು. ಪ್ರಾಥಮಿಕ ಶಿಕ್ಷಣವನ್ನು ಮುಗಿಸಿ ಶಾಲಾ ಶಿಕ್ಷಕರೂ ಆದರು. ಶಿಕ್ಷಕ ವೃತ್ತಿ ಅವರಿಗೆ ಪ್ರಿಯವಾಗಿತ್ತು. ಒಂದನೆಯ ತರಗತಿಯ ಮಕ್ಕಳಿಗೆ ಪದ್ಯದ ಜೊತೆಗೆ ಕಥೆ, ಹಾಡು, ಕವನ ಹೇಳಿ ಅವರಲ್ಲಿ ಓದುವಿನ ಬಗ್ಗೆ ಆಸಕ್ತಿ ಮೂಡಿಸಿದರು. ಬಹುಬೇಗ ಜನಪ್ರಿಯ ಮಾಸ್ತರು ಎಂಬ ಹೆಗ್ಗಳಿಕೆಗೆ ಪಾತ್ರರಾದರು. ಮಕ್ಕಳಿಗೆ ಬೋಧಿಸುವ ಜೊತೆಗೆ ನಿರಂತರವಾಗಿ ಅಧ್ಯಯನದಲ್ಲಿ ತೊಡಗಿಸಿಕೊಂಡರು. ಹೊಟ್ಟೆಯ ಹಸಿವಿಗಿಂತಲೂ ಜ್ಞಾನದಾಹ ಅವರನ್ನು ಹೆಚ್ಚು ಹೆಚ್ಚು ಕಾಡತೊಡಗಿತು.

ಆಗಲೇ ಲೋಕಮಾನ್ಯ ತಿಳಕರ ವಿಚಾರಗಳಿಂದ ಪ್ರಭಾವಿತರಾಗಿ ಪತ್ರಿಕೆಯೊಂದನ್ನು ಪ್ರಾರಂಭಿಸಿ, ತನ್ಮೂಲಕ ಜನರಲ್ಲಿ ಜಾಗೃತಿ ಮೂಡಿಸಿ, ದೇಶ ಸೇವೆ ಮಾಡುವ ಹಂಬಲವನ್ನು ತಮ್ಮ ಅಣ್ಣನವರಲ್ಲಿ ಹೇಳಿಕೊಂಡರು. ಅವರ ಈ ಆಶಯಕ್ಕೆ ವಂಗಭಂಗ ಚಳುವಳಿ, ಶಿರಸಿಯಲ್ಲಿ ನಡೆದ ಆರ್ಯ ಸಮಾಜದ ಚಟುವಟಿಕೆಗಳಿಂದ ಪ್ರಭಾವಿತರಾಗಿ ಮುಂದಿನ ಹಾದಿಯ ಗೋಚರಿಸಿ ತೊಡಗಿತು. ಶಿಕ್ಷಣ ವೃತ್ತಿಗೆ ವಿದಾಯ ಹೇಳಿ, ಮುಖ್ಯಶಿಕ್ಷಕರ, ವಿದ್ಯಾರ್ಥಿಗಳ ಒತ್ತಾಯವನ್ನು ನಯವಾಗಿ ನಿರಾಕರಿಸಿ, ತಮ್ಮ ಧ್ಯೇಯೋದ್ದೇಶಗಳನ್ನು ಸೂಕ್ಷ್ಮವಾಗಿ ತಿಳಿ ಹೇಳಿ ೧೯೦೬ರಲ್ಲಿ **"ಧರ್ನುರ್ಧಾರಿ"** ವಾರಪತ್ರಿಕೆಯನ್ನು ಆರಂಭಿಸಿದರು. ಆದರೆ ಅವರ ನಿರೀಕ್ಷೆಯಂತೆ ಸುಸೂತ್ರವಾಗಿ ಪತ್ರಿಕೆ ನಡೆಸಲಾಗಲಿಲ್ಲ. ಆರ್ಥಿಕ ಸಮಸ್ಯೆ ಅವರನ್ನು ಜರ್ಜರಿತರನ್ನಾಗಿ ಮಾಡಿತು. ಮುಂದೆ ಇಟ್ಟ ಹೆಜ್ಜೆಯನ್ನು ಹಿಂದಿಡಬಾರದೆಂಬ ಛಲ, ಹಠದಿಂದ ಅನೇಕ ರೀತಿಯ ಕಷ್ಟಗಳನ್ನು ಅನುಭವಿಸಬೇಕಾಯಿತು. ಎಷ್ಟೋ ದಿನ ಅವರಿಗೆ ನೀರೇ ಆಹಾರವಾಯಿತು. ಪತ್ರಿಕೆಯ ಎಲ್ಲಾ ಜವಾಬ್ದಾರಿಯನ್ನು ಶ್ರದ್ಧೆ, ಪ್ರೀತಿಯಿಂದ ನಿರ್ವಹಿಸಿದರು.

ಅವರಿಗೆ ಸ್ವಾರ್ಥದ ಬದುಕಿಗಿಂತ ಸಮಾಜ ಸೇವೆ ಮುಖ್ಯವಾಯಿತು. ತಾವು ಬದುಕಿರುವಷ್ಟು ಕಾಲ ಸಮಾಜಕ್ಕೆ ಏನಾದರೂ ಮಾಡಬೇಕು ಎಂದು ಸಂಕಲ್ಪ ಮಾಡಿದರು. ಪ್ರಾಪ್ತ ವಯಸ್ಕರಾದ ಮಂಜಪ್ಪನವರಿಗೆ ವಿವಾಹ ಮಾಡಲು ಮನೆಯವರು ಯೋಚಿಸಿ, ಸಮ್ಮತಿ ಕೇಳಿದಾಗ, ಕ್ಷಣಕಾಲ ಚಿಂತನೆಗೊಳಗಾದರು. ಅವರ ಮುಂದೆ ತಾವು ಸಾಧಿಸಬೇಕೆಂದುಕೊಂಡ ಕನಸು, ಆದರ್ಶ, ತಾವು ಮಾಡಬೇಕಾದ ಕೆಲಸಗಳು ಕಣ್ಣುಮುಂದೆ ಹಾದು ಹೋದವು. ಒಬ್ಬ ಯೋಧನಲ್ಲಿರುವ ಶ್ರದ್ಧೆ, ನಿಷ್ಠೆ, ಧೈರ್ಯ, ದೃಢಮನಸ್ಸು ಅವರಲ್ಲಿದ್ದುದರಿಂದ ವಿವಾಹ ಬಂಧನ ತಮ್ಮ ಯೋಜನೆಗಳಿಗೆ ಅಡ್ಡಿಯಾಗಬಹುದೆಂದು ಭಾವಿಸಿ ಒಂದು ತೀರ್ಮಾನಕ್ಕೆ ಬಂದರು. ನನ್ನ ಜೀವನ ಸಂಪೂರ್ಣವಾಗಿ ಸಮಾಜಕ್ಕೆ, ರಾಷ್ಟ್ರಕ್ಕೆ ಸಲ್ಲಬೇಕು, ಸೇವೆಯೇ ಗುರಿಯಾಗಿರುವುದರಿಂದ ಏಕಾಂಗಿಯಾಗಿಯೇ ಉಳಿದು ಅಂದುಕೊಂಡಿದ್ದನ್ನು ಸಾಧಿಸಬೇಕು ಎಂದು ಯೋಚಿಸಿ ಸಾಂಸಾರಿಕ ಜೀವನ ಬೇಡ ಎಂಬ ದೃಢ ನಿರ್ಧಾರಕ್ಕೆ ಬಂದರು. ಅವರ ತೀರ್ಮಾನವನ್ನು ಕೇಳಿ ಹೆತ್ತವರಿಗೆ ಬೇಸರವಾಯಿತು. ಆದರೆ ಅವರ ಬದುಕು ಸಮಾಜಕ್ಕೆ ಮೀಸಲಾಯಿತು.

ನೈಷ್ಠಿಕ ಬ್ರಹ್ಮಚಾರಿಯಂತೆ, ಸಂನ್ಯಾಸಿಗಳಂತೆ ಜೀವನ ನಡೆಸಲು ಪ್ರಾರಂಭಿಸಿದರು. ಖಾದಿಧಾರಿಗಳಾಗಿ ಸಪ್ಪೆ ಆಹಾರ ಸೇವನೆ ಮಾಡಲು ಆರಂಭಿಸಿದರು. ತ್ಯಾಗ ಮತ್ತು ಸೇವೆ ಅವರ ಜೀವನದ ಅವಿಭಾಜ್ಯ ಅಂಗವಾಯಿತು. ಆದರ್ಶಗಳ ಬೆನ್ನು ಹತ್ತಿ ಹೋಗುವ ದಾರಿ, ಕಲ್ಲು ಮುಳ್ಳುಗಳಿಂದ ಕೂಡಿದ ದುರ್ಗಮ ಮಾರ್ಗವಾಗಿದ್ದರೂ, ಅವರ ದೃಢ ಸಂಕಲ್ಪದಿಂದ ಅದರ ಮೇಲೆ ಹಾದು ಹೋಗಲು ಕಷ್ಟವೆನಿಸಲಿಲ್ಲ. ಬಹುಶಃ ಎಲ್ಲ ಮಹಾಪುರುಷರ ಜೀವನವೇ ಹೀಗೆಯೇ ಏನೋ ಅನಿಸುತ್ತದೆ. ಅವರು ನಂಬಿಕೊಂಡ ಆದರ್ಶಗಳು ಅವರನ್ನು ಕೈಹಿಡಿದವು ಎಂಬುದಕ್ಕೆ ಶ್ರೀ ಹರ್ಡೇಕರ್ ಮಂಜಪ್ಪನವರು ಜ್ವಲಂತ ನಿದರ್ಶನ.

**ಶರಣರ ಪ್ರಭಾವ :** ಆರ್ಥಿಕ ಮುಗ್ಗಟ್ಟು, ಓದುಗರ ಅಸಹಕಾರ ಮೊದಲಾದ ಕಾರಣಗಳಿಂದ 'ಧನುರ್ಧಾರಿ' ವಾರಪತ್ರಿಕೆಯನ್ನು ನಿಲ್ಲಿಸುವಂತಾಯಿತು. ಸದಾ ಅಧ್ಯಯನ ಶೀಲರಾಗಿದ್ದ ಶ್ರೀ ಮಂಜಪ್ಪನವರು ಬಸವಾದಿ ಶರಣರ ಜೀವನ ಆದರ್ಶಗಳನ್ನು ಓದಿ ಪ್ರಭಾವಿತರಾದರು. ಬಸವಣ್ಣನವರ ತತ್ತ್ವ ಸಿದ್ಧಾಂತಗಳು, ಅವರು ಕೈಗೊಂಡು ಅನುಷ್ಠಾನಗೊಳಿಸಿದ ಲೋಕೋತ್ತರ ಜೀವನ ಮೌಲ್ಯಗಳು ಅವರ ಮನಸ್ಸನ್ನು ಸೂಜಿಗಲ್ಲಿನಂತೆ ಆಕರ್ಷಿಸಿದವು. ಶರಣರ ವಿಚಾರಧಾರೆಗಳನ್ನು ವಿಚಾರದ ಒರೆಗಲ್ಲಿಗೆ ಹಚ್ಚಿ ನೋಡಿ ಪ್ರಸ್ತುತ ಸಮಾಜಕ್ಕೆ ಅವೆಲ್ಲವೂ ಸಮ್ಮತವಾದುದರಿಂದ ಅವುಗಳ ಬಗ್ಗೆ ಜನರಲ್ಲಿ ಅರಿವು ಮೂಡಿಸಲು ಅನೇಕ ಪ್ರಗತಿಪರ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಹಂತ ಹಂತವಾಗಿ ಕಾರ್ಯರೂಪಕ್ಕೆ ತರಲು ಪ್ರಾಮಾಣಿಕ ಪ್ರಯತ್ನ ಮಾಡಿದರು.



ಭಜನಾ ಸಂಘ, ಶ್ರಾವಣ ಮಾಸದಲ್ಲಿ ವಿಶೇಷ ಉಪನ್ಯಾಸ ಕಾರ್ಯಕ್ರಮಗಳನ್ನು ಏರ್ಪಡಿಸುವುದರ ಮೂಲಕ ಜನರಲ್ಲಿ ಜಾಗೃತಿ ಮೂಡಿಸಿದರು. ಇದರಿಂದ ದಾವಣಗೆರೆಯ ಜನರಿಗೆ ಹೊಸ ಭರವಸೆಯ ತಂಗಾಳಿ ಬೀಸಿದ ಅನುಭವವಾಯಿತು. ತಮ್ಮ ನಿಸ್ವಾರ್ಥ ಸೇವೆಯಿಂದ ಜನರಿಗೆ ಹತ್ತಿರವಾದರು. ಸಮಾಜದಲ್ಲಿ ಬಸವಣ್ಣನವರಿಗೆ ದೊರೆಯಬೇಕಾದ ಮನ್ನಣೆ, ಆದ್ಯತೆ ದೊರೆಯುತ್ತಿಲ್ಲ ಎಂಬುದನ್ನು ಮನಗೊಂಡ ಶ್ರೀ ಹರ್ಡೇಕರ ಮಂಜಪ್ಪನವರು ಬಸವ ಜಯಂತಿಯನ್ನು ಆಚರಿಸಬೇಕೆಂದು ಯೋಚಿಸಿ ಹಿರಿಯರೊಡನೆ ಈ ಬಗ್ಗೆ ವಿಚಾರ ವಿನಿಮಯ ನಡೆಸಿ ಮೊದಲ ಬಾರಿಗೆ ದಾವಣಗೆರೆಯಲ್ಲಿ ೧೯೧೩ ರಲ್ಲಿ ಮುರುಘಾಮಠದ ಪೂಜ್ಯ ಶ್ರೀ ಮೃತ್ಯುಂಜಯ್ಯ ಸ್ವಾಮಿಗಳವರ ಮಾರ್ಗದರ್ಶನ, ಸಹಕಾರದಿಂದ ಅಕ್ಷಯ ತೃತೀಯದಂದು ಆಚರಿಸುವ ಸಂಪ್ರದಾಯವನ್ನು ಆರಂಭಿಸಿದರು. ಇಡೀ ದೇಶದಲ್ಲಿಯೇ ಪ್ರಥಮ ಬಸವ ಜಯಂತಿ ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಿದ ಕೀರ್ತಿ ಶ್ರೀ ಹರ್ಡೇಕರ ಮಂಜಪ್ಪನವರಿಗೆ ಸಲ್ಲುತ್ತದೆ.

**ವೀರಶೈವ ತರುಣ ಸಂಘ:** ಬಸವ ಜಯಂತಿ ಆಚರಣೆಯಿಂದ ಅವರಿಗೆ ತೃಪ್ತಿಯಾಗಲಿಲ್ಲ. ಇಡೀ ಸಮಾಜವೇ ಕ್ರಿಯಾಶೀಲವಾಗುವಂತಹ ಕಾರ್ಯಕ್ರಮ ವನ್ನು ಹಮ್ಮಿಕೊಳ್ಳಬೇಕೆಂದು ಯೋಚಿಸಿ ಶರಣರ ತತ್ತ್ವಗಳನ್ನು ಪ್ರಚುರಪಡಿಸಲು ಯುವಕರ ಪಡೆ ಕಟ್ಟಬೇಕೆಂದು ಭಾವಿಸಿ ದಾವಣಗೆರೆ, ಹುಬ್ಬಳ್ಳಿ, ಪುಣೆಯ ಸ್ನೇಹಿತರನ್ನು ಸಂಪರ್ಕಿಸಿ, ಶ್ರೀ ಮೃತ್ಯುಂಜಯ್ಯ ಸ್ವಾಮಿಗಳ ಬೆಂಬಲದಿಂದ ೧೯೧೭ ರಲ್ಲಿ ವೀರಶೈವ ತರುಣ ಸಂಘವನ್ನು ಆರಂಭಿಸಿದರು. ಆ ಸಂಘದ ಮೂಲಕ ರಚನಾತ್ಮಕ ಕಾರ್ಯಕ್ರಮಗಳನ್ನು ರೂಪಿಸಿ ಹಂತ ಹಂತವಾಗಿ ಯಶಸ್ವಿಯಾಗಿ ಕಾರ್ಯರೂಪಕ್ಕೆ ತಂದರು.

ಬಸವಾದಿ ಶರಣರ ಆದರ್ಶಗಳನ್ನು, ಜೀವನ ಮೌಲ್ಯಗಳನ್ನು ಜನ ಸಾಮಾನ್ಯರಿಗೆ ಮುಟ್ಟಿಸಬೇಕೆಂಬ ದೃಷ್ಟಿಯಿಂದ ಕೆಲವು ಚಿಕ್ಕ ಚಿಕ್ಕ ಕೃತಿಗಳನ್ನು ಬರೆದು ಕಷ್ಟವಾದರೂ ತಾವೇ ಪ್ರಕಟಿಸಿ ಜನಸಾಮಾನ್ಯರಿಗೆ ಮುಟ್ಟಿಸುವಲ್ಲಿ ಅವರ ಸಾಹಸ, ಶ್ರದ್ಧೆ ಅನುಪಮವಾದುದು. ಅವರು ಹೊರತಂದ ಕೆಲವು ಪ್ರಮುಖ ಕೃತಿಗಳು ಹೀಗಿವೆ.

೧. ಅಕ್ಕನ ಉಪದೇಶ ೨. ಅಣ್ಣನ ಕ್ರಾಂತಿ ೩. ಬಸವಣ್ಣನವರ ಚರಿತ್ರೆ ೪. ಲಿಂಗಪೂಜೆ ಐತಿಹಾಸಿಕ ವಿವೇಚನೆ ೫. ಕಾಯಕವೇ ಕೈಲಾಸ ೬. ಬಸವ ಸಂದೇಶ ೭. ವೀರಶೈವ ಏಕೀಕರಣ ೮. ವೀರಶೈವ ಸಮಾಜ ಸುಧಾರಣೆ ೯. ಬಸವ ಭಕ್ತಿ ೧೦. ವಚನಕಾರರ ಸಮಾಜ ಸೇವೆ ೧೧. ಲಿಂಗಪೂಜೆ ಐತಿಹಾಸಿಕ ವಿವೇಚನೆ ೧೨. ಮಹಾನುಭಾವರಾದ ಬಸವಣ್ಣನವರ ಉಪಮೆಗಳು. ೧೩. ಏಕಲವ್ಯ ೧೪. ಕಚದೇವನ ಕಥೆ ೧೫. ಕಾಯಕವೇ ಕೈಲಾಸ ೧೬. ಗೃಹಶಕ್ತಿ? ೧೭. ಖಾದಿ ೧೮. ಖಾದಿಶಾಸ್ತ್ರ ೧೯. ಗೋಸೇವೆ ೨೦. ಚನ್ನಬಸವಣ್ಣನವರ ಉಪದೇಶ ೨೧. ಜಾತಿವಾದದ ವಿಮರ್ಶೆ ೨೨. ಜಾತ್ರೆಗಳ ಸುಧಾರಣೆ ೨೩. ಬ್ರಹ್ಮಚರ್ಯ ೨೪. ಭಕ್ತಿಯ ಬೆಳಕು ೨೫. ಭಗವಾನ ಬುದ್ಧನ ಚರಿತ್ರೆ ೨೬. ರಾಷ್ಟ್ರಗೀತೆ ೨೭. ಲಿಂಗರಾಜರ ಚರಿತ್ರೆ ೨೮. ಲಿಂಗವಂತರ ಪ್ರಾಚೀನತೆ ೨೯. ವಿಜಯವಾಣಿ ೩೦. ವೀರಶೈವ ಏಕೀಕರಣ ೩೧. ವೀರಶೈವ ಮತಭೋದೆ ೩೨. ಸತ್ಯಾಗ್ರಹ ಧರ್ಮ ೩೩. ಸಿದ್ಧರಾಮ ಶಿವಯೋಗಿಗಳ ಉಪದೇಶ ೩೪. ಹಿಂದೂ ಸಂಘಟನೆ ೩೫. ಸುಬೋಧಸಾರ ೩೬. ಸತ್ಯಾಗ್ರ ಇತ್ಯಾದಿ ೮೦ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತ ಗೊಳಿಸಿದ್ದಾರೆ.

ಅವರು ತಮ್ಮ ಬದುಕನ್ನೇ ಬಸವಣ್ಣನವರ ಆದರ್ಶಗಳನ್ನು ಮನೆ ಮನಗಳಲ್ಲಿ ಬಿತ್ತುವುದಕ್ಕೆ ಮೀಸಲಾಗಿಟ್ಟ ಮಹಾಶರಣ.

**ಆಶ್ರಮ ಸ್ಥಾಪನೆ – ಖಾದಿ ಬಗ್ಗೆ ಪ್ರಚಾರ :** ೧೯೨೩ ರಲ್ಲಿ ಹರಿಹರದಲ್ಲಿ ತುಂಗಾಭದ್ರಾ ನದಿ ತೀರದಲ್ಲಿ ಒಂದು ಆಶ್ರಮ ಸ್ಥಾಪಿಸಿ ಖಾದಿ ಬಗ್ಗೆ ಜನಜಾಗೃತಿ ಮೂಡಿಸುವಲ್ಲಿ ಅವರು ಪಟ್ಟ ಪರಿಶ್ರಮ ಅಪಾರವಾದುದು. ಅವರು ಯಾವುದೇ ಕಾರ್ಯವನ್ನು ಕೈಗೊಂಡರೂ ನಿಷ್ಠೆ, ಶ್ರದ್ಧೆ, ಬದ್ಧತೆಯಿಂದ ಮಾಡುತ್ತಿದ್ದರು. ಸದಾ ಅವರು ತಮ್ಮ

ಸಕಾರಾತ್ಮಕ ಚಿಂತನೆಯಿಂದ ಹಿಡಿದ ಕಾರ್ಯವನ್ನು ಯಶಸ್ವಿಯಾಗುವಂತೆ ಮಾಡುವಲ್ಲಿ ಸಫಲರಾಗುತ್ತಿದ್ದರು. ಶ್ರೀ ಮಂಜಪ್ಪನವರು ಖಾದಿ ಮಹತ್ವವನ್ನು ಹಳ್ಳಿ ಹಳ್ಳಿಗಳಿಗೆ ಹೋಗಿ ಪ್ರಚಾರ ಮಾಡುತ್ತಾ ಅನೇಕ ಸಭೆ ಸಮಾರಂಭಗಳಲ್ಲಿ ಉಪನ್ಯಾಸ ನೀಡಿ ಜನರಲ್ಲಿ ಅರಿವು ಮೂಡಿಸುತ್ತಿದ್ದರು. ಅವರು ಬರೆದ 'ಖಾದಿ ಶಾಸ್ತ್ರ' ಕೃತಿಯಲ್ಲಿ ಸಮಗ್ರವಾಗಿ ಖಾದಿಯ ಮಹತ್ವ, ಪ್ರಾಚೀನತೆ, ಪವಿತ್ರತೆ ಬಗ್ಗೆ ವಿವರವಾಗಿ ಪರಿಚಯ ಮಾಡಿಕೊಟ್ಟಿದ್ದಾರೆ.

ಮಹಾತ್ಮ ಗಾಂಧೀಜಿ ವಿಚಾರಧಾರೆಗಳ ಬಗ್ಗೆ ಪ್ರಭಾವ ಹೊಂದಿದ್ದ ಶ್ರೀ ಮಂಜಪ್ಪನವರು, ಅವರ ಜೊತೆಗೆ ನಿಕಟ ಪರಿಚಯ, ಆತ್ಮೀಯತೆಯನ್ನು ಹೊಂದಿದ್ದರು. ಸ್ವತಃ ಸಬರಮತಿ ಆಶ್ರಮದಲ್ಲಿ ಮೂರು ವಾರ ನೆಲೆ ನಿಂತು ಅವರ ದಿನಚರಿ, ವಿಚಾರ, ತತ್ತ್ವಗಳ ಪರಿಚಯ ಪಡೆದಿದ್ದರು. ತಾವು ಕರ್ನಾಟಕದಲ್ಲಿ ರಾಷ್ಟ್ರೀಯ ಹೋರಾಟದ ಬಗ್ಗೆ ಪ್ರಚಾರ ಮಾಡುವಾಗ ಗಾಂಧೀಜಿಯವರ ತತ್ತ್ವ ಸಿದ್ಧಾಂತಗಳ ಬಗ್ಗೆ ಜನರಲ್ಲಿ ಅರಿವು ಮೂಡಿಸುತ್ತಿದ್ದರು.

ರಾಷ್ಟ್ರೀಯತೆಯ ಬಗ್ಗೆ ಸದಾ ಗೌರವ, ಕಳಕಳಿಯನ್ನು ಹೊಂದಿದ್ದ ಶ್ರೀ ಹರ್ಡೇಕರ ಮಂಜಪ್ಪನವರು, ರಾಷ್ಟ್ರೀಯ ಪ್ರಜ್ಞೆಯ ಬಗ್ಗೆ ಜನರಲ್ಲಿ ಅರಿವು ಮೂಡಿಸಿದ ರೀತಿ ಮಹತ್ತರವಾದುದು. ಅವರಿಂದ ಅದಕ್ಕೆ ನಮ್ಮ ನಾಡಿನಲ್ಲಿ ಭದ್ರವಾದ ಬುನಾದಿ ದೊರೆಯಿತು. ಶ್ರೀ ಮಂಜಪ್ಪನವರ ರಾಷ್ಟ್ರೀಯ ಪ್ರಜ್ಞೆಯನ್ನು ಕುರಿತು ವಿದ್ವಾಂಸರು ಹೇಳಿರುವ ಮಾತುಗಳು ಗಮನಾರ್ಹವಾದವು. "ರಾಷ್ಟ್ರೀಯತೆ ಎಂಬುದು ಮಂಜಪ್ಪನವರ ಉಸಿರಾಗಿತ್ತು. ಸೈದ್ಧಾಂತಿಕವಾಗಿ ಮತ್ತು ಅನ್ವಯಿಕವಾಗಿ ಅದನ್ನು ಬಾಳಿದವರಲ್ಲಿ ಇವರು ಅಗ್ರಗಣ್ಯರು. ಇದು ಕಾರಣವಾಗಿಯೇ ಅವರ ಬರಹದಲ್ಲೆಲ್ಲ ರಾಷ್ಟ್ರೀಯತೆ ಪದೇ ಪದೇ ಕಾಣುತ್ತದೆ. ಇದು ಕನ್ನಡದಲ್ಲಿ ರಾಷ್ಟ್ರೀಯ ಸಾಹಿತ್ಯದ ಮಾರ್ಗ ಹುಟ್ಟಿಕೊಂಡು ಬೆಳೆಯಲು ಕಾರಣವಾಯಿತು. ಇದರಿಂದಾಗಿಯೇ ಮಂಜಪ್ಪನವರನ್ನು ಕನ್ನಡ ರಾಷ್ಟ್ರೀಯ ಸಾಹಿತ್ಯದ ಪಿತಾಮಹರೆಂದು ಕರೆಯುವುದುಂಟು. ಅವರಂತೆ ರಾಷ್ಟ್ರ ಧರ್ಮವನ್ನು ಅಳವಡಿಸಿಕೊಂಡವರು, ಅದನ್ನು ಎಲ್ಲರಲ್ಲಿ ತುಂಬಿದವರು, ಸುದೀರ್ಘಕಾಲ ಅದಕ್ಕಾಗಿ ದುಡಿದವರು ಇನ್ನೊಬ್ಬರು ಇಲ್ಲ" ಎಂದು ಹೇಳಿದರೆ ಅವರ ಜೀವನ ಗಾಥೆಯನ್ನು ಅಧ್ಯಯನ ಮಾಡಿದವರಿಗೆ ಅತಿಶಯೋಕ್ತಿಯೆನಿಸುವುದಿಲ್ಲ.

ವೀರಶೈವರಿಗೆ ಖಾದಿ ಧಾರಣೆಯು ಒಂದು ಧಾರ್ಮಿಕ ಕರ್ತವ್ಯವೆಂದು ಮನವರಿಕೆ ಮಾಡಿಕೊಟ್ಟಿದ್ದು ಅವರ ಗಣ್ಯ ಸಾಧನೆ. ಈ ಬಗ್ಗೆ ಅವರು ಒಂದು ಕಡೆ ಹೀಗೆ ಹೇಳಿದ್ದಾರೆ. "ಕೈನೂಲಿನ ಬಟ್ಟೆಯನ್ನೇ ಉಪಯೋಗಿಸ ಬೇಕೆಂಬುದಕ್ಕೆ ಧಾರ್ಮಿಕ ನಿಯಮವಿದ್ದುದು ನನಗೆ ಯಾವ ಧರ್ಮ ಗ್ರಂಥದಲ್ಲಿಯೂ ದೊರೆಯಲಿಲ್ಲ. ಲಿಂಗವಂತರ ೭೭೦ ಶೀಲಗಳಲ್ಲಿ ಮಾತ್ರ ೨೧ನೇ ಶೀಲವು 'ಕೊಂಬಿನ ಲಾಳಿಯನ್ನು ಮುಟ್ಟಿಸದೆ ಲಿಂಗವಂತರಿಂದಲೇ ನೇಯಿಸಲ್ಪಟ್ಟ ಬಟ್ಟೆಯನ್ನು ಧರಿಸಬೇಕೆಂಬುದಾಗಿದ್ದದ್ದನ್ನು ನೋಡಿ ನನಗೆ ಪರಮ ಸಂತೋಷವಾಯಿತು' ಎಂದು ಹೇಳಿರುವುದನ್ನು ಗಮನಿಸಿದಾಗ ಖಾದಿಯನ್ನು ವೀರಶೈವ ಸಮಾಜದಲ್ಲಿ ಜನಪ್ರಿಯಗೊಳಿಸುವಲ್ಲಿ ಅವರು ಮಾಡಿದ ಹೋರಾಟ, ಪ್ರಾಮಾಣಿಕ ಪ್ರಯತ್ನ, ಇದರಿಂದ ಆದ ಪರಿಣಾಮವನ್ನು ಗಮನಿಸಬಹುದಾಗಿದೆ.

**ವೀರಶೈವ ವಿದ್ಯಾಲಯ :** ಹಲವಾರು ಜನರ ಮುಕ್ತ ಮನಸ್ಸಿನ ಆರ್ಥಿಕ ನೆರವು, ಸಹಕಾರದಿಂದ ವೀರಶೈವ ವಿದ್ಯಾಲಯವನ್ನು ಪ್ರಾರಂಭಿಸಿದರು. ಈ ವಿದ್ಯಾಲಯದಲ್ಲಿ ವಿದ್ಯಾರ್ಥಿ ನಿಲಯ, ವರ್ಗದ ಕೋಣೆಗಳು, ಗ್ರಂಥ ಭಂಡಾರ, ಅಡುಗೆ ಮನೆ, ಪೂಜಾ ಮನೆಗಳಿದ್ದವು. ಅಲ್ಲಿ



ಒಂದು ಮುದ್ರಣಾಲಯವನ್ನು ಸ್ಥಾಪಿಸಿ ಅದರ ಮೂಲಕ ಪತ್ರಿಕೆಯನ್ನು, ಕೃತಿಗಳನ್ನು ಪ್ರಕಟಿಸಿದರು. ಅನೇಕ ವಿದ್ಯಾರ್ಥಿಗಳಿಗೆ ಮುದ್ರಣದ ಬಗ್ಗೆ ಶಿಕ್ಷಣ ನೀಡಿದರು. ಕೆಲವರಿಗೆ ಪತ್ರಿಕೆ ಸಂಪಾದಿಸುವ, ಲೇಖನ ಬರೆಯುವ, ಪ್ರಚಾರ ನಡೆಸುವ ವಿಧಿ ವಿಧಾನಗಳನ್ನು ಪರಿಚಯ ಮಾಡಿಕೊಟ್ಟರು. ಈ ವಿಶಿಷ್ಟ ವಿದ್ಯಾಲಯದಲ್ಲಿ ಬದುಕಿಗೆ ಪೂರಕವಾದ ಹಲವಾರು ವಿಷಯಗಳ ಬಗ್ಗೆ ತರಬೇತಿ ನೀಡಿದರು. ಅವುಗಳೆಂದರೆ ತೋಟಗಾರಿಕೆ, ವ್ಯಾಯಾಮ, ಪ್ರಾರ್ಥನೆ, ಯೋಗ, ನೂಲುವುದು, ಬಟ್ಟೆ ತಯಾರಿಕೆ, ಬಣ್ಣಗಾರಿಕೆ, ಮುದ್ರಣ, ಮೊಳೆ ಜೋಡಣೆ, ಕರಡು ತೆಗೆವುದು, ಕರಡು ತಿದ್ದುವುದು, ಗೃಹವಿಜ್ಞಾನ, ದೇಸಿ ಪದ್ಧತಿ, ಆರೋಗ್ಯ ರಕ್ಷಣೆ, ಹೀಗೆ ಅನೇಕ ವಿಷಯಗಳ ಬಗ್ಗೆ ತರಬೇತಿ ನೀಡಲಾಗುತ್ತಿತ್ತು. ಎಲ್ಲರಿಗೂ ಭೇದಭಾವವಿಲ್ಲದೆ ಒಂದೇ ಪಂಕ್ತಿಯಲ್ಲಿ ಭೋಜನ ವ್ಯವಸ್ಥೆಯಿತ್ತು, ಅಲ್ಲಿ ಶಿಸ್ತು-ಅಚ್ಚುಕಟ್ಟು, ದಕ್ಷತೆ, ವಿನಯ, ವಿಧೇಯತೆಗಳಿಂದ ವರ್ತಿಸುವ ವಾತಾವರಣವಿತ್ತು.

**ಪತ್ರಿಕಾಕರ್ತರಾಗಿ :** ಶ್ರೀ ಹರ್ಡೇಕರ ಮಂಜಪ್ಪನವರು ಪತ್ರಿಕಾ ಕ್ಷೇತ್ರದಲ್ಲಿ ನಲವತ್ತು ವರ್ಷಗಳ ಕಾಲ ಮಾಡಿದ ಸಾಧನೆ ಅನುಪಮವಾದುದು. ಧರ್ನುರ್ಧಾರಿ ವಾರಪತ್ರಿಕೆಯ ಜೊತೆಗೆ ವಿದ್ಯಾಲಯ ಪತ್ರಿಕೆ, ಕೈಬರಹದ ವಾರಪತ್ರಿಕೆ, ಬಾಲಸಂಗಯ್ಯ, ಖಾದಿ ವಿಜಯಾ, ಉದ್ಯೋಗ ಮಾಸಿಕಪತ್ರಿಕೆಗಳನ್ನು ಶರಣ ಸಂದೇಶ ವಾರಪತ್ರಿಕೆಯನ್ನು ಪ್ರಕಟಿಸುವುದರ ಮೂಲಕ ಜನರಲ್ಲಿ ಅರಿವಿನ ಜ್ಯೋತಿಯನ್ನು ಬೆಳಗಿಸಿದರು.

**ಸಮಾಜ ಸುಧಾರಣೆಗೆ ಕೃತಿಗಳ ಪ್ರಕಟಣೆ :** ಅನುಭವಿಸುವ ಸಮಾಜದಲ್ಲಿ ನಡೆಯುತ್ತಿದ್ದ ಅನ್ಯಾಯ, ಅನುಭವಿಸುವ ನೋವು, ಅಂಧಶ್ರದ್ಧೆ, ಮೂಢನಂಬಿಕೆಗಳ ನಿವಾರಣೆಗಾಗಿ ಮಂಜಪ್ಪನವರು ಪತ್ರಿಕೆಗಳ ಮೂಲಕ ಅವಿರತ ಪ್ರಯತ್ನ ಮಾಡಿದಂತೆಯೇ ಕೆಲವು ಅಭ್ಯಾಸಪೂರ್ಣ ಕೃತಿಗಳನ್ನು ಹೊರತಂದು, ಸಮಾಜವನ್ನು ಜಾಗೃತಿಗೊಳಿಸುವ ಕೆಲಸ ಮಾಡಿದರು. ಅವರು ಬರೆದ ಕೆಲವು ಕೃತಿಗಳು ಹೀಗಿವೆ:

೧. ಕರ್ತವ್ಯ ಸಿದ್ಧಾಂತ ೨. ತರುಣರ ಕೈಗನ್ನಡಿ ೩. ಪತಿತೋದ್ಧಾರ ೪. ಆದಿಜನ ಸುಧಾರಣೆ ೫. ದಾಂಪತ್ಯ ಧರ್ಮ ೬. ದಾಂಪತ್ಯ ಜೀವನ ೭. ಆಧುನಿಕ ಜರ್ಮನಿ ೮. ಗೃಹಶಿಕ್ಷಣ ೯. ಜಾತಿವಾದ ವಿಮರ್ಶೆ ೧೦. ಸ್ತ್ರೀನೀತಿ ಸಂಗ್ರಹ.

ಅವರು ಒಂದೊಂದು ಕೃತಿಯನ್ನು ರಚಿಸ ಬೇಕಾದರೂ ಅಮೂಲಾಗ್ರವಾಗಿ ಅಧ್ಯಯನ ಮಾಡಿ ಮಾಹಿತಿಯನ್ನು ಸಂಗ್ರಹಿಸಿ, ಕುತೂಹಲ, ಆಸಕ್ತಿ ಯುಂಟಾಗುವಂತೆ, ಶಬ್ದಾಡಂಬರವಿಲ್ಲದೆ ಸರಳವಾಗಿ ಎಲ್ಲರಿಗೂ ಸುಲಭವಾಗಿ ಅರ್ಥವಾಗುವಂತೆ ಬರೆಯುತ್ತಿದ್ದರು. ಇವುಗಳಲ್ಲದೆ ಮಕ್ಕಳಿಗಾಗಿಯೂ ಕೃತಿಗಳನ್ನು ರಚಿಸಿ, ಮಕ್ಕಳ ಬೌದ್ಧಿಕ ವಿಕಾಸವಾಗುವಂತೆ ಮಾಡಿದರು. ಶ್ರೀ ಮಂಜಪ್ಪನವರ ಮಾತುಗಳು ಮಕ್ಕಳಿಗೆ ಕಲ್ಲುಸಕ್ಕರೆಯಂತಿರುತ್ತಿದ್ದವು. ಮಕ್ಕಳಿಗಾಗಿ ಬರೆಯುವ ಕಲೆಯನ್ನು ಮಂಜಪ್ಪನವರು ಚೆನ್ನಾಗಿ ಅರಿತಿದ್ದರು ಎಂಬ ವಿಮರ್ಶಕರ ಅಭಿಪ್ರಾಯ ಸಾಧುವಾಗಿದೆ.

ಶ್ರೀ ಹರ್ಡೇಕರ ಮಂಜಪ್ಪನವರು 'ಜನಸೇವಕ' ವಚನಾಂಕಿತದಲ್ಲಿ ಆಧುನಿಕ ವಚನಗಳನ್ನು ರಚಿಸಿದ್ದಾರೆ. ಅವರ ವಚನಗಳ ಮೇಲೆ ಶರಣರ ವಚನಗಳ ಪ್ರಭಾವವಿರುವುದನ್ನು ಗಮನಿಸಬಹುದು. 'ಜನಸೇವಕನ' ವಚನಗಳು ಕೃತಿಯನ್ನು ಕುರಿತು ವಿದ್ವಾಂಸರು ಹೀಗೆ ಅಭಿಪ್ರಾಯಪಟ್ಟಿದ್ದಾರೆ. "ಪ್ರಾಚೀನ ವಚನ ಸಾಹಿತ್ಯಕ್ಕೆ ಜೇಡರ ದಾಸಿಮಯ್ಯ ಆದ್ಯನಾದಂತೆ ಆಧುನಿಕ ವಚನ ಸಾಹಿತ್ಯಕ್ಕೆ ಹರ್ಡೇಕರ ಮಂಜಪ್ಪನವರು ಆದ್ಯರೆನಿಸಿದ್ದಾರೆ. ಜನಸೇವಕನ ವಚನಗಳು ಮಂಜಪ್ಪನವರ ಆತ್ಮನಿವೇದನೆಯ ಪ್ರತೀಕದಂತೆ ತೋರುತ್ತವೆ. ವೈಚಾರಿಕತೆ ಯ ಎಳೆಗಳನ್ನು ಹೊಂದಿರುವ ಇವು ಅರ್ಥೈಸುತ್ತಾ ಹೋದಂತೆ ವಿಚಾರಧಾರೆ ಬೆಳೆಯುವಂತೆ ಮಾಡುವ ಸಾಮರ್ಥ್ಯ ಹೊಂದಿವೆ." ಅವರ ಈ ಅಭಿಪ್ರಾಯವನ್ನು ಸಂಪೂರ್ಣವಾಗಿ ಒಪ್ಪಲಾಗದಿದ್ದರೂ, ಅವರ ಕೊಡುಗೆಯನ್ನು ಅಲ್ಲಗಳೆಯುವಂತಿಲ್ಲ.

**ವಿವಿಧ ಸಂಘ ಸಂಸ್ಥೆಗಳ ಸ್ಥಾಪನೆ:** ಶ್ರೀ ಮಂಜಪ್ಪನವರ ಚಿಂತನೆಗಳು, ದೂರದೃಷ್ಟಿ ಅಪರಿಮಿತವಾದವು. ಜನರಲ್ಲಿ ಸುಧಾರಣೆ ತರಲು, ಜಾಗೃತಿ ಮೂಡಿಸಲು ಸಮಾಜದಲ್ಲಿ ಪರಿವರ್ತನೆಯ ಗಾಳಿ ಬೀಸುವಂತೆ ಮಾಡಲು ಅನೇಕ ಸಂಘ ಸಂಸ್ಥೆಗಳನ್ನು ಸ್ಥಾಪಿಸಿದರು. ಅವುಗಳಲ್ಲಿ ಕೆಲವನ್ನಾದರೂ ಹೆಸರಿಸುವುದಾದರೆ :

೧. ಭಜನಾ ಸಂಘ ೨. ವೀರಶೈವ ಹಿತೋಪದೇಶ ಸಂಘ ೩. ವೀರಶೈವ ತರುಣ ಸಂಘ ೪. ಸತ್ಯಾಗ್ರಹ







ಸಮಾಜ ೫. ಜ್ಞಾನ ಪ್ರಸಾರಕ ಸಂಘ ೬. ಬಸವೇಶ್ವರ ಸೇವಾದಳ ೭. ವೀರಶೈವ ತತ್ತ್ವ ಪ್ರಸಾರಕ ಸಂಘ ೮. ವೀರಶೈವ ವಿದ್ಯಾಲಯ ಸ್ಥಾಪನೆ ೯. ಅಖಿಲ ಭಾರತ ವೀರಶೈವ ಖಾದಿಭಂಡಾರ ೧೦. ವೀರಶೈವ ತತ್ತ್ವಪ್ರಚಾರಕ ಸಂಘ.

ಇವುಗಳ ಜೊತೆಗೆ ಕೆಲವು ವಿಶಿಷ್ಟವಾದ ಕಾರ್ಯಕ್ರಮಗಳನ್ನು ಆರಂಭಿಸಿದ ಹೆಗ್ಗಳಿಕೆ ಶ್ರೀ ಮಂಜಪ್ಪನವರದು. ಅವುಗಳಲ್ಲಿ : ೧. ಶ್ರಾವಣಮಾಸ ಉಪನ್ಯಾಸ ಮಾಲೆ ೨. ಬಸವ ಜಯಂತಿ ಆಚರಣೆ ಆರಂಭ ೩. ಮಹಾದೇವಿಯಕ್ಕ ಸ್ಮರಣೋತ್ಸವ ಆರಂಭ ೪. ವಿದ್ಯಾಲಯ ಉಪನ್ಯಾಸ ಮಾಲೆ.

ಶ್ರೀ ಮಂಜಪ್ಪನವರ ಬದುಕು, ಚಿಂತನೆ, ಕತೃತ್ವಶಕ್ತಿ, ಕ್ರಿಯಾಶೀಲತೆ, ಬದ್ಧತೆ, ನಿಷ್ಠೆ, ಶ್ರದ್ಧೆ, ಹಿಡಿದ ಕೆಲಸವನ್ನು ಪೂರ್ಣಗೊಳಿಸುವ ಛಲ, ಸ್ವಾಭಿಮಾನ, ರಾಷ್ಟ್ರಪ್ರೇಮ, ಇವೆಲ್ಲವೂ ಸಾರ್ವಜನಿಕ ಕ್ಷೇತ್ರ, ರಾಷ್ಟ್ರ ಬದುಕಿನ ಕ್ಷೇಮಕ್ಕಾಗಿ ಮೀಸಲಾಗಿತ್ತು. ಅವರು ಆಡಿದ ಮಾತು, ಮಾಡಿದ ಎಲ್ಲ ಕೃತಿಗಳಲ್ಲಿ ರಾಷ್ಟ್ರಧರ್ಮ ತತ್ತ್ವಗಳೇ ಎದ್ದು ಕಾಣಿಸುತ್ತವೆ. ಅವರು ಉಜ್ವಲ ಕನ್ನಡಿಗರೂ, ನಿಷ್ಠಾವಂತ ವೀರಶೈವರೂ ಆಗಿದ್ದರು. ನೈಷ್ಠಿಕ ಬ್ರಹ್ಮಚಾರಿಯಾಗಿ ಜೀವನವನ್ನು ಸಮಾಜಕ್ಕಾಗಿಯೇ ಮೀಸಲಾಗಿಟ್ಟ ಶ್ರೀಯುತರು ತಾವೇ ಕಟ್ಟಿ ಬೆಳೆಸಿದ ಆಲಮಟ್ಟಿ ಆಶ್ರಮದಲ್ಲಿ ಕೃಷ್ಣಾ ತೀರದಲ್ಲಿ ೧೯೪೭ರ ಜನವರಿ ೩ ರಂದು ಲಿಂಗದೊಳಗೊಂದಾದರು. ಅವರು ಭೌತಿಕವಾಗಿ ನಮ್ಮ ಮುಂದಿಲ್ಲದಿದ್ದರೂ, ಅವರು ಬಿಟ್ಟುಹೋದ ಆದರ್ಶಗಳು, ಮಾನವೀಯ ಮೌಲ್ಯಗಳು ಇಂದಿನ ತಲೆಮಾರಿನವರಿಗೆ ದಾರಿದೀಪವಾಗಿದೆ.

## ಶ್ರೀವಾಣಿ

ಆತ್ಮ ಶುದ್ಧಿಯಿಲ್ಲದೆ ಅಹಿಂಸಾ ಧರ್ಮವನ್ನು ಅನುಸರಿಸುತ್ತೇನೆ ಎನ್ನುವುದು ಬರಿಯ ಕನಸು. ಹೃದಯಶುದ್ಧಿ ಇಲ್ಲದವರಿಗೆ ಎಂದಿಗೂ ಪರಮಾತ್ಮನ ಸಾಕ್ಷಾತ್ಕಾರವಾಗುವುದಿಲ್ಲ. ಆದುದರಿಂದ ಆತ್ಮ ಶುದ್ಧಿಯೆಂದರೆ ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಶುದ್ಧಿ ಎಂದು ಅರ್ಥವಾಗಬೇಕು. ಶುದ್ಧಿಯ ಸ್ವಭಾವ ಎಲ್ಲೆಡೆಯೂ ಹರಡುವುದಾದುದರಿಂದ, ಒಬ್ಬನು ಆತ್ಮಶುದ್ಧಿಯುಳ್ಳವನಾದರೆ, ಅವನ ಸುತ್ತಲಿನ ವಾತಾವರಣವೆಲ್ಲ ಶುದ್ಧವಾಗುವುದು ಎಂಬ ಮಹಾತ್ಮ ಗಾಂಧೀಜಿಯವರ ಮಾತುಗಳನ್ನಿಂದು ಘನ ಗಂಭೀರವಾಗಿ ಚಿಂತನೆ ಮಾಡಬೇಕಾಗಿದೆ.

## ಪ್ರಾಮಾಣಿಕತೆ !

ಹೆಂಡತಿ : ಅಬ್ಬಾ, ಕಾಲ ಎಷ್ಟು ಕೆಟ್ಟುಹೋಯಿತು. ಈ ಪ್ರಪಂಚದಲ್ಲಿ ಎಂತೆಂಥ ಮೋಸಗಾರರು ಹುಟ್ಟಿಕೊಂಡುಬಿಟ್ಟಿದ್ದಾರೆ.

ಗಂಡ : ಏಕೆ, ಏನಾಯಿತು ಅಂಥಾದ್ದು? ಯಾರು ಮೋಸಮಾಡಿದರು?

ಹೆಂಡತಿ : ನೋಡಿ. ಬೆಳಿಗ್ಗೆ ಹಾಲಿನವನು ನನಗೆ ಚಿಲ್ಲರೆ ಕೊಡುವಾಗ ಖೋಟಾ ನಾಣ್ಯ ಕೊಟ್ಟು ಹೋಗಿಬಿಟ್ಟ. ಇಂಥ ಮೋಸಗಾರರ ಮಧ್ಯೆ ನಮ್ಮಂತಹಪ್ರಾಮಾಣಿಕರ ಗತಿ ಏನು?

ಗಂಡ : ಹೌದಾ? ಎಲ್ಲಿ ಆ ಖೋಟಾ ನಾಣ್ಯ? ತೋರಿಸು ನೋಡೋಣ. ಅವನ ಮೇಲೆ ಪೊಲೀಸಿಗೆ ದೂರು ಕೊಡೋಣ.

ಹೆಂಡತಿ : ಅಯ್ಯೋ, ನಾನೂ ತರಕಾರಿಯವನಿಗೆ ಹಣ ಕೊಡುವಾಗ ಅದನ್ನು ಸೇರಿಸಿ ಕೊಟ್ಟುಬಿಟ್ಟೆ!

★ ★ ★

ಹಳ್ಳಿಯೊಂದರ ಬಳಿ ಒಬ್ಬ ಅಧಿಕಾರಿಯ ಕಾರೊಂದು ರಸ್ತೆಯಲ್ಲಿದ್ದ ಹಳ್ಳಕ್ಕೆ ಬಿದ್ದಿತು. ಅಲ್ಲೇ ಇದ್ದ ನಾಲ್ಕು ಜನ ಓಡಿಬಂದು ಕೂಡಲೇ ಹಗ್ಗ ತಂದು ಕಾರಿಗೆ ಕಟ್ಟಿ ಅದನ್ನು ಮೇಲಕ್ಕೆಳೆದು ನಿಲ್ಲಿಸಿದರು. ಆ ಜನರ ಸಹಾಯಗುಣ ಕಂಡು ಆ ಅಧಿಕಾರಿಗೆ ಹೃದಯ ತುಂಬಿ ಬಂದಿತು. ಸಂತೋಷದಿಂದ ಅವರಿಗೆ 50 ರೂ.ಗಳನ್ನು ಮೆಚ್ಚುಗೆಯಾಗಿ ನೀಡಿದ. ಅವರು 'ಸಂಕೋಚ' ವ್ಯಕ್ತಪಡಿಸುತ್ತಲೇ ಆ ಕೊಡುಗೆಯನ್ನು ಸ್ವೀಕರಿಸಿ ಅಲ್ಲಿಂದ ಹೋದರು.

ಕಾರಿನ ಚಾಲಕ ವಾಹನವನ್ನು ಸರಿಪಡಿಸಿಕೊಂಡು ಹೊರಡಬೇಕೆನ್ನುವಷ್ಟರಲ್ಲಿ ಇನ್ನೊಬ್ಬ ಅಲ್ಲಿಗೆ ಬಂದ. ಅಧಿಕಾರಿ ಹಳ್ಳಿಯ ನಾಲ್ಕು ಜನ ಮಾಡಿದ ಸಹಾಯವನ್ನು ಪ್ರಸ್ತಾಪಿಸಿ, ಕುತೂಹಲಕ್ಕಾಗಿ ''ಅವರೆಲ್ಲ ಏನು ಕೆಲಸ ಮಾಡುತ್ತಿದ್ದಾರೆ?'' ಎಂದು ಆತನನ್ನು ಕೇಳಿದ. ಆತ ಹೇಳಿದ. ''ಅಯ್ಯೋ, ಸ್ವಾಮಿ, ಅವರದ್ದು ಇದೇ ಕೆಲಸ. ಹಳ್ಳ ತೋಡೋದು, ನಿಮ್ಮಂಥೋರು ಕಾರುಬಿದ್ದರೆ ಎತ್ತೋದು. ಹಣ ಗಿಟ್ಟಿಸೋದು. ಕನಿಷ್ಠ ದಿನಕ್ಕೆ ಒಬ್ಬಿಬ್ಬರಾದರೂ ಅವರಿಗೆ ನಿಮ್ಮಂತಹ ಗಿರಾಕಿಗಳು ಸಿಕ್ತಾರೆ.''

ಅಧಿಕಾರಿ ಮರುಮಾತಾಡದೆ ಚಾಲಕನಿಗೆ ಹೇಳಿ ತಕ್ಷಣವೇ ಹೊರಟುಬಿಟ್ಟರು!







ಲೇಖನ

# ಬಸವಣ್ಣನವರ ಸಾಮಾಜಿಕ ವ್ಯವಸ್ಥೆ

– ಆರ್.ಎಸ್. ಚಾಪಗಾವಿ *

ಯುಗಕ್ಕೊಂದು ಪ್ರಭೆ ಜಗವನ್ನು ಬೆಳಗುತ್ತದೆಯೆಂದು ಹೇಳುವುದುಂಟು. ಹನ್ನೆರಡನೇ ಶತಮಾನದ ಕಾಲ. ಅದೊಂದು ಸಂಕ್ರಮಣದ ಕಾಲ. ಸಮಾಜವು ಅಜ್ಞಾನ ಮೂಢನಂಬಿಕೆ, ಅಂಧಶ್ರದ್ಧೆ, ಕಂದಾಚಾರಗಳಿಂದ ತತ್ತರಿಸಿ ಹೋಗಿತ್ತು. ಜಾತಿ ಭೇದ ಲಿಂಗಭೇದ, ವರ್ಗ, ವರ್ಣ ತಾರತಮ್ಯಗಳಿಂದ ತುಂಬಿ ಹೋಗಿತ್ತು. ರಾಜಶಾಹಿ ಹಾಗೂ ಪುರೋಹಿತ ಶಾಹಿ ಇವೆರಡರ ಮುಷ್ಟಿಯಲ್ಲಿ ಶೋಷಣೆಗೆ ಒಳಗಾಗಿತ್ತು. ದಾರಿದ್ರ್ಯ ಅನ್ಯಾಯ, ಅತೃಪ್ತಿ ಅಸಮಾನತೆ, ಅಶಾಂತಿ ತಾಂಡವವಾಡುತ್ತಿತ್ತು. ದುಡಿಯುವ ಜೀವಿಗಳನ್ನು ಶೂದ್ರರು ಅಸ್ಪೃಶ್ಯರು ಎಂದು ವಿಂಗಡಿಸಿ, ಗುಲಾಮಗಿರಿಗೆ ದೂಡಲಾಗಿತ್ತು. ಇಂಥ ಒಂದು ದಾರುಣ ಸ್ಥಿತಿಯಲ್ಲಿ ಯಾವ ಜನ್ಮದ ಪುಣ್ಯವೋ ಈಶನ ಸಂಕಲ್ಪವೊ, ಮರುಭೂಮಿಯಲ್ಲಿ ಓಯಾಸಿಸ್ಸು ಕಂಡಂತೆ, ಕಾರಿರುಳ ಕತ್ತಲೆಯಲ್ಲಿ ಸೂರ್ಯನುದಯಿಸಿದಂತೆ, ಅನಾಥ ಮಗುವಿಗೆ ತಾಯಿ ದೊರಕಿದಂತೆ, ಶಾಂತಿ ಸಹನೆ ಕರುಣೆಯೇ ಮೈವೆತ್ತಿ ಬಂದಂತೆ. ಕಾಲನ ಕರೆಗೆ ಉದಿಸಿ ಬಂದ ಧ್ರುವತಾರೆಯಂತೆ ಪುಣ್ಯಪುರುಷ ಬಸವಣ್ಣನವರ ಉದಯವಾಯಿತು.

ಆಳವಾದ ವೈಚಾರಿಕ ಪ್ರಜ್ಞೆ ಕ್ರಿಯಾಶೀಲ ಕರ್ತೃತ್ವಶಕ್ತಿ, ಸಮಷ್ಟಿ ಕಲ್ಯಾಣದ ಕಳಕಳಿ, ಅನುಭಾವ ಶ್ರೀಮಂತಿಕೆ ಅವಿರಳ ಅಧ್ಯಾತ್ಮ ಸಂಪತ್ತು, ಅನನ್ಯ ಮಾನವೀಯ ಅನುಕಂಪನಗಳಿಂದ ಕೂಡಿದ ಮಹಾಮಾನವತಾವಾದಿ ಬಸವಣ್ಣನವರು ಈ ಲೋಕವನ್ನು ನೋಡಿದ ರೀತಿ ಎಲ್ಲರಂತಿರದೆ ಬೇರೆಯೇ ಆಗಿತ್ತು. ತಲೆತಲಾಂತರದಿಂದ ಬೆಳೆದು ಬಂದ ಅಜ್ಞಾನ ಮೂಢನಂಬಿಕೆ ಡಂಭಾಚಾರ ಅಸಮಾನತೆಯಿಂದ ಜಡ್ಡುಗಟ್ಟಿ ಹೋಗಿದ್ದ ಸಮಾಜ ವ್ಯವಸ್ಥೆಯನ್ನು ಕಂಡು ಅವರಿಗೆ ಕಸಿವಿಸಿಯಾಯಿತು. ಒಂದೆಡೆ ರಾಜಶಾಹಿಯ ದಬ್ಬಾಳಿಕೆ, ಇನ್ನೊಂದೆಡೆ ದಿಕ್ಕು ತಪ್ಪಿಸುವ ಪುರೋಹಿತಶಾಹಿಯ ವ್ಯವಸ್ಥಿತ ಸುಲಿಗೆ ಇವನ್ನು ಕಂಡು ಅವರ ಮನ ರೋಸಿ ಹೋಯಿತು. ತುಳಿತಕ್ಕೊಳಗಾದ ಕೆಳವರ್ಗದ ದುಡಿಯುವ ಜೀವಿಗಳ ಹತಾಶ ಸ್ಥಿತಿ ಕಂಡು ಅವರ ಮನ ಮಿಡುಕಿತು, ಮಮ್ಮಲ ಮರುಗಿತು. ಇಂಥ ಜೀವಿಗಳ ಏಳ್ಗೆಗಾಗಿ ಅವರ ಮನ ಹಗಲಿರುಳು ಚಿಂತಿಸಿತು. ಅವರ ಸುಖದುಃಖಗಳೊಂದಿಗೆ ಬಸವಣ್ಣನವರು ತಮ್ಮನ್ನು ಸಮೀಕರಿಸಿಕೊಂಡರು. ಅವರ ಸೇವೆಯೇ ಜಗದೀಶನ ಸೇವೆ ಎಂದು ತಿಳಿದುಕೊಂಡರು. ಜಾತಿ ವರ್ಗ ಲಿಂಗ ಭೇದಗಳಿಲ್ಲದ ಸಮಾನತೆಯ ಸುಖಿ ಸಮಾಜವೊಂದರ ಕನಸು ಕಂಡರು. ಅಂಥ ಒಂದು ಮಾದರಿ ಸಮಾಜ ನಿರ್ಮಾಣಕ್ಕೆ ಸಂಕಲ್ಪ ತೊಟ್ಟರು. ಅದಕ್ಕಾಗಿ ಟೊಂಕ ಕಟ್ಟಿ ನಿಂತರು.

**ಕಲಿಯ ಕೈಯ ಕೈದುವಿನಂತಿರಬೇಕಯ್ಯ**
**ಎಲುದೋರೆ ಸರಸವಾಡಿದಡೆ ಸೈರಿಸಬೇಕಯ್ಯಾ**
**ರಣದಲ್ಲಿ ತಲೆ ಹರಿದು ಬಿದ್ದು ಬೊಬ್ಬಿಡಲದಕ್ಕೆ**
**ಒಲಿವ ಕೂಡಲ ಸಂಗಮದೇವ.**

ತಮ್ಮ ಸಂಕಲ್ಪ ಸಾಧನೆಯಲ್ಲಿ ಅಡ್ಡಬಂದ ಎಡರು ತೊಡರುಗಳಿಗೆ ಎದೆಯೊಡ್ಡಿ ಮುನ್ನಡೆದರು. ಸಮಗ್ರ ಸಾಮಾಜಿಕ ಕ್ರಾಂತಿಯೇ ಅವರ ಗುರಿಯಾಗಿತ್ತು. ಜಾತಿ ವರ್ಗ ಲಿಂಗ ಭೇದ ಪೋಷಿಸುವ, ಪಾಪ ನರಕದ ಭಯ ಬಿತ್ತುವ ಸನಾತನ ಕರ್ಮ ಸಿದ್ಧಾಂತವನ್ನು ತಿರಸ್ಕರಿಸಿ ಕಾಯಕ ದಾಸೋಹ ಸಿದ್ಧಾಂತಗಳ ತಳಹದಿಯ ಮೇಲೆ ಸಮಾನತೆಯ ಹೊಸದೊಂದು ಸಮಾಜ ವ್ಯವಸ್ಥೆಗೆ ಬೀಜ ಬಿತ್ತಿದರು. ಅವರ ಕಾಯಕ ಮತ್ತು ದಾಸೋಹ ಸಿದ್ಧಾಂತವು ಜಗತ್ತಿಗೇ ಮಾದರಿಯಾಗಿದೆ.

* ೬೪೪, 'ಬಸವ ಚೇತನ' ರಾಮತೀರ್ಥನಗರ ಬಸವೇಶ್ವರ ಬಡಾವಣೆ, ಬೆಳಗಾವಿ-೧೫

## ಕಾಯಕ

ಕಾಯಕ ಸಿದ್ಧಾಂತದ ಮೇಲೆ ಬಸವಣ್ಣನವರು ಹೊಸದೊಂದು ಸಮಾಜ ನಿರ್ಮಾಣಕ್ಕೆ ತೊಡಗಿದರು. ಜಗತ್ತಿನ ಯಾವ ಧರ್ಮದಲ್ಲಿಯೂ ಕಾಯಕ ಸಿದ್ಧಾಂತವು ಕಂಡು ಬರುವುದಿಲ್ಲ. ಮನುಷ್ಯನ ಜೀವನ ಉಜ್ಜೀವನಗೊಳ್ಳುವುದು, ಸಮಾಜವು ಮುಂದೆ ಬರುವುದು ಕಾಯಕದಿಂದಲೇ. ಪ್ರತಿಯೊಬ್ಬರು ದುಡಿದು ಉಣ್ಣಬೇಕು. ದುಡಿಮೆಯನ್ನೇ ಅವರು ಕಾಯಕವೆಂದು ಕರೆದರು. ಕಾಯವು ಕಾಯಕದಲ್ಲಿ ತನ್ಮಯವಾಗಬೇಕು. ಕಾಯಕ ನಿತ್ಯ ನಿರಂತರ ನಡೆಯಬೇಕು. ಕಾಯಕವೇ ಕೈಲಾಸವೆಂದು ಹೇಳಿ ಬಸವಣ್ಣನವರು ಕಾಯಕದ ಮಹತ್ವವನ್ನು ತಿಳಿಸಿದರು. ಕಾಯಕವು ಅರ್ಥವಿಲ್ಲದ ಕೇವಲ ದೈಹಿಕ ದುಡಿಮೆಯಲ್ಲ. ಕೇವಲ ಹೊಟ್ಟೆ ಹೊರೆಯಲು ಕೈಕೊಂಡ ಕೆಲಸವಲ್ಲ. ಅನ್ಯರ ಸುಖಕ್ಕಾಗಿ ಬೆವರು ಸುರಿಸುವ ಗುಲಾಮಗಿರಿಯಲ್ಲ. ಭೌತಿಕ ಸುಖ ಮಾತ್ರ ಅದರ ಗುರಿಯಲ್ಲ. ಕಾಯಕದಲ್ಲಿ ತನ್ನ ಹಾಗೂ ತನ್ನ ಕುಟುಂಬದ ಹೊಟ್ಟೆಹೊರೆಯುವ ಉದ್ದೇಶ ಮಾತ್ರವಾಗಿರದೆ ತಾನು ಸಮಾಜದ ಒಂದು ಭಾಗವಾಗಿರುವ ಕಾರಣ ಕಾಯಕದ ಫಲ ಸಮಾಜಕ್ಕೂ ಸಲ್ಲಬೇಕು ಎಂಬ ಭಾವವಿರಬೇಕು. ಕಾಯಕವು ಸತ್ಯಶುದ್ಧವಾಗಿರಬೇಕು. ಅದಕ್ಕೆ ತನು ಮನ ಅರ್ಪಿತವಾಗಿರಬೇಕು. ಅದರ ಫಲ ದಾಸೋಹದಲ್ಲಿ ವಿನಿಯೋಗವಾಗಬೇಕು. ಆಗ ಮಾಡಿದ ಕಾಯಕ ಸಾರ್ಥಕತೆಯನ್ನು ಪಡೆಯುತ್ತದೆ.

**'ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ,**
**ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ**
**ಮಾಡುವ ನೀಡುವ ನಿಜಗುಣವುಳ್ಳಡೆ**
**ಕೂಡಿಕೊಂಡಿರ್ಪ ನಮ್ಮ ಕೂಡಲಸಂಗಮದೇವ'**

ನಾವು ಮಾಡುವ ಕಾಯಕ ಕೇವಲ ತೋರಿಕೆಗಾಗಿ ಮಾಡದೆ ಮನಮುಟ್ಟಿ ಮಾಡಬೇಕು,

'ಮಾಡಿದೆನೆಂಬುದು ಮನದಲ್ಲಿ ಹೊಳೆದರೆ
ಏಡಿಸಿ ಕಾಡಿತ್ತು ಶಿವನ ಡಂಗುರ.'

ಮಾಡಿದೆನೆಂಬ ಭಾವವಾಗಲಿ ಅಹಂಕಾರವಾಗಲಿ ಮನದಲ್ಲಿ ಉಳಿಯಬಾರದು. ಮಾಡುವಾಗ ನಿಷ್ಪೃಹ ಭಾವನೆ ಇರಬೇಕು. 'ಮಾಡುವ ನೀಡುವ ಭಕ್ತನ ಕಂಡಡೆ ನಿಧಿನಿಧಾನವ ಕಂಡಂತಾಯಿತ್ತು' ಹೀಗೆ ನಿಸ್ಪೃಹ ಭಾವನೆಯಿಂದ ಮಾಡುವ ಭಕ್ತರನ್ನು ಬಸವಣ್ಣನವರು ನಿಧಿ ನಿಧಾನಕ್ಕೆ ಹೋಲಿಸಿದ್ದಾರೆ. ಬಸವಣ್ಣನವರ ಕಾಯಕ ತತ್ತ್ವ ಎಲ್ಲರಿಗೂ ಮಾನ್ಯವಾಯಿತು. ಎಲ್ಲರನ್ನೂ ಆಕರ್ಷಿಸಿತು. ಸಮಾಜದ ಎಲ್ಲ ಸ್ತರದ ಕಾಯಕ ಜೀವಿಗಳು ಕಲ್ಯಾಣದತ್ತ ಧಾವಿಸಿದರು. ಕಾಯಕ ಚಳುವಳಿಯಲ್ಲಿ ಭಾಗವಹಿಸಿದರು. ಅನುಭವ ಮಂಟಪದಲ್ಲಿ ಕಲೆತು ಅನುಭಾವಗೋಷ್ಠಿ ನಡೆಸಿದರು. ಸಮಾಜದ ಏಳ್ಗೆಗೆ ಚಿಂತಿಸಿದರು. ನುಲಿಯ ಚಂದಯ್ಯ, ಮಡಿವಾಳ ಮಾಚಯ್ಯ, ಮಾದಾರ ಚೆನ್ನಯ್ಯ, ಮೇದಾರ ಕೇತಯ್ಯ, ಸಮಗಾರ ಹರಳಯ್ಯ, ಹೆಂಡದ ಮಾರಯ್ಯ, ಹಡಪದ ಅಪ್ಪಣ್ಣ, ಪಡಿಹಾರಿ ಉತ್ತಣ್ಣ, ತುರುಗಾಯಿ ರಾಮಣ್ಣ, ಮೋಳಿಗೆಯ ಮಾರಯ್ಯ, ಆಯ್ದಕ್ಕಿ ಲಕ್ಕಮ್ಮ ಕಸಗುಡಿಸುವ ಸತ್ಯಕ್ಕ ಹೀಗೆ ಕಾಯಕ ಜೀವಿಗಳ ತಂಡೇ ಬಸವಣ್ಣನವರ ಕ್ರಾಂತಿಯ ಕ್ರಿಯೆಯಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡಿತು. ಸಮಾನತೆಯ ಸುಖಿ ಸಮಾಜದ ಕನಸನ್ನು ನನಸಾಗಿಸಿತು.

ಕಾರೆಯ ಸೊಪ್ಪಾದರೂ ಸರಿ ಕಾಯಕದಿಂದ ಬಂದುದು ಮಾತ್ರ ಲಿಂಗಾರ್ಪಿತವೆಂಬುದು ಶರಣರ ನಿಲುವು, ಸತ್ಯ ಶುದ್ಧ ಕಾಯಕ ಮಾಡುತ್ತಿದ್ದರೆ ಗುರುವಿನ ಹಂಗೂ ಲಿಂಗದ ಹಂಗೂ ಕೂಡ ಬೇಕಾಗಿಲ್ಲವೆಂದರು. ನುಲಿಯ ಚಂದಯ್ಯನು ಕಾಯಕದಲ್ಲಿ ನಿರತನಾಗಿದ್ದಾಗ ಕಟ್ಟಿಕೊಂಡ ಇಷ್ಟಲಿಂಗ ಕಳಚಿ ಬಿದ್ದರೂ ಲೆಕ್ಕಿಸದೆ ತನ್ನ ಕಾಯಕದಲ್ಲಿ ತೊಡಗುತ್ತಾನೆ. ಲಿಂಗಕ್ಕಿಂತ ಕಾಯಕ ನಿಷ್ಠೆ ಮತ್ತು ಜಂಗಮ ದಾಸೋಹ ಶ್ರೇಷ್ಠವೆಂದು ಹೇಳಿದ್ದಾನೆ. 'ಬಟ್ಟೆಯಲ್ಲಿ ಹೊನ್ನು ವಸ್ತ್ರ ಬಿದ್ದಿದ್ದಡೆ, ಕೈಮುಟ್ಟಿ ಎತ್ತಿದೆನಾದಡೆ ಅಯ್ಯಾ ನಿಮ್ಮಾಣೆ' ಎಂದು ಹೇಳಿದ ಸತ್ಯಕ್ಕ ಮುಕ್ಕಟೆಯಾಗಿ ಏನನ್ನೂ ಬಯಸದಿರುವುದೇ ಶರಣರ ನಿಲುವೆಂದು ತಿಳಿಸಿದ್ದಾಳೆ.

**ಆವ ಕಾಯಕವಾದಡೂ ಸ್ವ ಕಾಯಕವ ಮಾಡಿ**
**ಗುರು ಲಿಂಗ ಜಂಗಮದ ಮುಂದಿಟ್ಟು**
**ಒಕ್ಕುದ ಹಾರೈಸಿ ಮಿಕ್ಕುವ ಕೈಕೊಂಡು**
**ವ್ಯಾಧಿ ಬಂದಡೆ ನರಳು, ಬೇನೆ ಬಂದಡೆ ಒರಲು**
**ಜೀವ ಹೋದಡೆ ಸಾಯಿ, ಇದಕ್ಕಾ ದೇವರ ಹಂಗೇಕೆ?**

ಶರಣ ಲದ್ದೆಯ ಸೋಮಣ್ಣನ ಈ ವಚನ ಕಾಯಕ ನಿಷ್ಠೆಗೆ ಭಾಷ್ಯ ಬರೆದಂತಿದೆ. ಕಾಯಕ ನಿಷ್ಠೆ ಇದ್ದವಗೆ ದೇವರ ಹಂಗೂ ಇರಲಾರದು. ದೇವರ ಹತ್ತಿರ ಆತ ಏನನ್ನೂ ಯಾಚಿಸನು, ಮಾನವ ಜನಾಂಗಕ್ಕೆ ಈ ವಚನ ಒಂದು ದೊಡ್ಡ ಸಂದೇಶವಾಗಿದೆ. 'ಕಾಯಕ ನಿಂದಿತ್ತು ಹೋಗಯ್ಯ ಎನ್ನಾಳ್ದನೆ' ಅನುಭವ ಮಂಟಪದ ಅನುಭಾವಗೋಷ್ಠಿಯಲ್ಲಿ ತನ್ಮಯನಾಗಿದ್ದ ತನ್ನ ಗಂಡ



ಮಾರಯ್ಯನನ್ನು ಆಯ್ದಕ್ಕಿ ಲಕ್ಕಮ್ಮ ಎಚ್ಚರಿಸಿ ಕಾಯಕಕ್ಕೆ ಕಳಿಸಿದ ಘಟನೆ ಗಮನಾರ್ಹವಾಗಿದೆ. 'ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ? ಒಮ್ಮನವ ಮೀರಿ ಇಮ್ಮನದಲ್ಲಿ ತಂದಿರಿ, ಇದು ಅಮಲೇಶ್ವರ ಲಿಂಗಕ್ಕೆ ಸಲ್ಲದ ಬೋನ', ಭಕ್ತರಿಗೆ ಆಸೆಯೆಂಬುದು ಸಲ್ಲದು, ತನ್ನ ಕೈಕೂಲಿಗಿಂತ ಇಮ್ಮಡಿ ಅಕ್ಕಿ ತಂದಿದ್ದ ಮಾರಯ್ಯನಿಗೆ ಬುದ್ಧಿ ಹೇಳಿದ ಹೆಚ್ಚಿನ ಅಕ್ಕಿಯನ್ನು ತಿರುಗಿ ಕಳಿಸಿದ ಲಕ್ಕಮ್ಮನು, 'ಭಕ್ತರು ಕಾಯಕವೆಂದು ಹೇಳಿ ದಾಯಗಾರಿಕೆಯಲ್ಲಿ ತಂದು ದಾಸೋಹ ಮಾಡ ಬಹುದು'?, 'ಮನಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ ಚಿತ್ತ ಶುದ್ಧ ಕಾಯಕ ಮಾಡುವ ಭಕ್ತಂಗೆ ಎತ್ತ ನೋಡಿದತ್ತ ಲಕ್ಷ ತಾನಾಗಿಪ್ಪಳು' ಎಂದು ತನ್ನ ಗಂಡನಿಗೆ ಉಪದೇಶ ನೀಡಿ ಕಾಯಕನಿಷ್ಠೆ ಮೆರೆದಿದ್ದಾಳೆ.

ಬಿಜ್ಜಳನ ಮಂತ್ರಿಯಾಗಿ ಬಸವಣ್ಣನವರು ಎಲ್ಲರನ್ನು ಕಾಯಕದಲ್ಲಿ ತೊಡಗಿಸಿದರು. ಜನ ಕಲ್ಯಾಣಕ್ಕಾಗಿ ರಾಜ್ಯದ ತೆರಿಗೆ ಪದ್ಧತಿಯನ್ನು ಪುನರ್ಘಟಿಸಿದರು. ಶಿಕ್ಷಣ ವಿದ್ಯಾಭ್ಯಾಸಕ್ಕಾಗಿ ಕವಣೆ ಸುಂಕ, ಶೃಂಗಾರ ಸಾಧನ, ರಂಜನೀಯ ವಸ್ತುಗಳ ಮೇಲೆ ಉಂಡಿಗೆ ಸುಂಕ, ದುಡಿಯದೆ ತಿಂದುಂಡು ತಿರುಗುವ ಉಂಡಾಡಿಗಳ ಮೇಲೆ ಬಂಕದರೆ ಸುಂಕ, ಹೀಗೆ ಹಲವು ವಿಧದ ಸುಂಕಗಳನ್ನು ಜಾರಿಗೆ ತಂದರು. ರಾಜ್ಯದಲ್ಲಿ ಎಲ್ಲರೂ ಕಾಯಕ ಜೀವಿಗಳಾಗಿ ಬಿಜ್ಜಳನ ಭಂಡಾರ ತುಂಬಿ ತುಳುಕಿತು.

**'ದೇವ ಸಹಿತ ಭಕ್ತ ಮನೆಗೆ ಬಂದಡೆ**
**ಕಾಯಕವಾವುದೆಂದು ಬೆಸಗೊಂಡೆನಾದಡೆ**
**ನಿಮ್ಮಾಣೆ ! ನಿಮ್ಮ ಪ್ರಮಥರಾಣೆ !**

ಎಲ್ಲ ಭಕ್ತರು ಮಾಡುವ ಕಾಯಕಗಳೆಲ್ಲ ಸಮನಾದುವು, ಪವಿತ್ರವಾದುವು ಎಂದು ಹೇಳಿದ ಬಸವಣ್ಣನವರು ಕಾಯಕದ ಗೌರವ ಹೆಚ್ಚಿಸಿದರು. ಚರ್ಮದ ಕೆಲಸ ಮಾಡುತ್ತಿದ್ದ ಹರಳಯ್ಯನ ಕಾಯಕವು ತಮ್ಮ ಮಂತ್ರಿ ಕಾಯಕದಷ್ಟೇ ಶ್ರೇಷ್ಠವಾದುದೆಂದು ಹೇಳಿದರು. ಆಗ ಸಮಾಜದಲ್ಲಿ ರೂಢಿಯಲ್ಲಿದ್ದ ಎಲ್ಲ ಕಲೆಗಳು ಕೂಡ ಕಾಯಕದ ಸ್ವರೂಪ ಪಡೆದುಕೊಂಡವು. ಕಲೆಗಳು ಕೂಡ ಕಾಯಕದ ಸ್ವರೂಪ ಪಡೆದುಕೊಂಡವು. ಸಂಗೀತ, ಕಾವ್ಯ, ಗಮಕ, ನಾಟಕ, ಹಾಸ್ಯನಗೆ, ಚಿತ್ರಕಲೆ, ಶಿಲ್ಪಕಲೆ, ಕಿಳ್ಳಿಕೇತ, ಗೊಂಬೆಯಾಟ, ಡೊಂಬರಾಟ ಮೊದಲಾದ ಎಲ್ಲ ಕಲೆಗಳೂ ಕಾಯಕಗಳಾಗಿ ನಾಡಿನ ಕಲಾ ಸಂಪತ್ತು ವಿಜೃಂಭಿಸಿತು. ಕಿನ್ನರಿ ಬೊಮ್ಮಯ್ಯ, ಕಲಕೇತ ನಗೆಯ ಮಾರಯ್ಯ, ಕಂಕರಿ ಕಕ್ಕಯ್ಯ, ಬೊಮ್ಮಯ್ಯ, ಢಕ್ಕೆಯ್ಯ ಮಾರಯ್ಯ, ರಾಗದ ಸಂಗಣ್ಣ, ಬಹುರೂಪಿ ಚೌಡಯ್ಯ ಮೊದಲಾದ ಶರಣರು ತಮ್ಮ ಕಲೆಗಳನ್ನೇ ಕಾಯಕವಾಗಿಸಿ ಜನರಿಗೆ ರಂಜನೆ ನೀಡುವುದರೊಂದಿಗೆ ಸಮಾಜವನ್ನು ತಿದ್ದುತ್ತ, ಶಿವಭಕ್ತಿ ಬಿತ್ತುತ್ತ, ಜಂಗಮದಾಸೋಹ ಮಾಡುತ್ತ ಬಸವಣ್ಣನವರ ಆಶಯಗಳನ್ನು ಈಡೇರಿಸಿದರು. ೧೯ನೇ ಶತಮಾನದಲ್ಲಿ ಯುರೋಪಿನಲ್ಲಿ ಕಾರ್ಮಿಕ ಸಂಘಟನೆ ಹಾಗೂ ಚಳುವಳಿ ಪ್ರಾರಂಭವಾಯಿತೆಂದು ಹೇಳುತ್ತಾರೆ. ಆದರೆ ಹನ್ನೆರಡನೇ ಶತಮಾನದ ಕಾಲಕ್ಕೇ ಬಸವಣ್ಣನವರು ಈ ಕಾರ್ಯವನ್ನು ಮಾಡಿ ಜಗತ್ತಿನ ಪ್ರಥಮ ಕಾರ್ಮಿಕ ಸಂಘಟನೆಕಾರ ಎಂಬ ಕೀರ್ತಿಗೆ ಪಾತ್ರರಾಗಿದ್ದಾರೆ.

**'ಭಂಡವ ತುಂಬಿದ ಬಳಿಕ ಸುಂಕವ ತೆತ್ತಲ್ಲದೆ ಹೋಗಬಾರದು'**

ದುಡಿಮೆ ಹಾಗೂ ಬದುಕು ಇವೆರಡು ಆಂತರಿಕ ವಿಕಾಸ ಸೂತ್ರದಿಂದ ನಿಯಂತ್ರಿತವಾಗಿರಬೇಕು. ಸಂಪತ್ತನ್ನು ಗಳಿಸಿದ ಬಳಿಕ ಅದರ ಒಂದಂಶವನ್ನು ಸಮಾಜಕ್ಕೆ ಸರಕಾರಕ್ಕೆ ಸುಂಕವಾಗಿ ಸಲ್ಲಿಸಲೇಬೇಕು. ಇದು ನಿಯಮ. ಗಳಿಕೆಯ ಒಂದು ಭಾಗ ಸಮಾಜದ ಒಳಿತಿಗೆ ನೀಡುವುದನ್ನು ಬಸವಣ್ಣನವರು 'ದಾಸೋಹ' ಎಂದು ಕರೆದಿದ್ದಾರೆ. ದಾಸೋಹವೆಂದರೆ ದಾನವಲ್ಲ, ಭಿಕ್ಷೆಯೂ ಅಲ್ಲ. ಪ್ರತಿಯೊಬ್ಬರು ಅನುಸರಿಸಬೇಕಾದ ಒಂದು ತತ್ತ್ವ ಬಸವಣ್ಣನವರ ಪೂರ್ವದಲ್ಲಿ ದಾನ ಪದ್ಧತಿ ಜಾರಿಯಲ್ಲಿತ್ತು. ದಾಸೋಹವಿರಲಿಲ್ಲ. ದಾನ ಪ್ರಕ್ರಿಯೆಯು ಸಮಾಜದ ಮೇಲ್ವರ್ಗದಲ್ಲಿ ನಡೆಯುವ ಒಂದು ವ್ಯವಹಾರವಾಗಿತ್ತು. 'ವರ್ಣಾನಾಂ ಬ್ರಾಹ್ಮಣೋ ಗುರು' ಎಂಬ ಉಕ್ತಿ ಪ್ರಚಾರದಲ್ಲಿತ್ತು. ಬ್ರಾಹ್ಮಣರನ್ನು ತೃಪ್ತಿಪಡಿಸುವುದೇ ಧರ್ಮದ ಮೂಲವಾಗಿತ್ತು. ಬಹುಪಾಲು ಶಾಸನಗಳಲ್ಲಿ ರಾಜರು ಮತ್ತು ರಾಜಪರಿವಾರದವರು ಬ್ರಾಹ್ಮಣರಿಗೆ ದಾನ ಮಾಡಿದ ವಿಷಯಗಳೇ ತುಂಬಿವೆ. ದೇವಸ್ಥಾನಗಳಿಗೆ ದಾನ ಬಿಟ್ಟ ಬಗ್ಗೆ ಶಾಸನಗಳು ಸಾಕಷ್ಟಿದ್ದರೂ ಆ ದೇವಸ್ಥಾನಗಳ ಉಸ್ತುವಾರಿಯೆಲ್ಲ ಬ್ರಾಹ್ಮಣ ಪುರೋಹಿತರ ಕೈಯಲ್ಲಿ ಇದ್ದುದನ್ನು ಗಮನಿಸಬೇಕು. ರಾಜರು ಪ್ರಜೆಗಳ ಮೇಲೆ ಹೆಚ್ಚಿನ ತೆರಿಗೆ ವಿಧಿಸಿ ಒತ್ತಾಯದಿಂದ ವಸೂಲ ಮಾಡುತ್ತಿದ್ದರು. ಬೇರೆ ರಾಜ್ಯಗಳ ಮೇಲೆ ದಾಳಿ ಮಾಡಿ ಸಂಪತ್ತಿನ, ಲೂಟಿ ಮಾಡುತ್ತಿದ್ದರು. ಇಲ್ಲವೆ ಕಪ್ಪ ಕಾಣಿಕೆಯಾಗಿ ಪಡೆಯುತ್ತಿದ್ದರು. ಹೀಗೆ ಸಂಗ್ರಹಿಸಿದ ಸಂಪತ್ತಿನ ಭಾಗವನ್ನು ಶೋಡಶೋಪ ದಾನಗಳ

ರೂಪದಲ್ಲಿ ಪುರೋಹಿತ ವರ್ಗವು ಪಡೆದುಕೊಳ್ಳುತ್ತಿತ್ತು. ಒಬ್ಬ ಬಲಿಷ್ಠ ರಾಜನ ಹಿಂದೆ ಒಂದು ಬಲಿಷ್ಠ ಪುರೋಹಿತ ಪಡೆ ಇದ್ದೇ ಇರುತ್ತಿತ್ತು. ದಾನದ ಸಂಪತ್ತು ಕಾಯಕದಿಂದ ಬಂದುದಲ್ಲ. ಅದು ಅನ್ಯಾಯದಿಂದ ಗಳಿಸಿದುದಾಗಿತ್ತು. ದಾನ ಮಾಡುವುದರಲ್ಲಿ ಅಹಂಭಾವವಿರುತ್ತಿತ್ತು.

ಸಮಾಜದಲ್ಲಿ ಉಚ್ಚ ನೀಚ ವರ್ಗ ಭೇದವನ್ನು ಪ್ರೋತ್ಸಾಹಿಸುವ ದಾನ ಸಂಸ್ಕೃತಿಯನ್ನು ನಿರಾಕರಿಸಿ ಬಸವಣ್ಣನವರು ದಾಸೋಹ ಸಂಸ್ಕೃತಿಯನ್ನು ಹುಟ್ಟು ಹಾಕಿದರು. ದಾಸೋಹದಲ್ಲಿ ಅರ್ಪಣಾ ಭಾವವಿರುತ್ತದೆ. ನಾ ನಾಡಿದೆನೆಂಬ ಅಹಂಭಾವವಿರುವುದಿಲ್ಲ. ಸ್ವೀಕರಿಸುವವನಲ್ಲಿ ಕೀಳರಿಮೆ ಇರುವುದಿಲ್ಲ. ಪ್ರಸಾದ ಭಾವನೆ ಇರುತ್ತದೆ. ದಾಸೋಹವು ಧಾರ್ಮಿಕ ಆಚರಣೆಯಾಗಿರದೆ ಸಮಾಜದ ಒಂದು ನಿಯಮವಾಗಿದೆ. ಕಾಯಕ ದಾಸೋಹಗಳು ಬದುಕಿನ ಎರಡು ಅಂಗಗಳು. ಅವು ಒಂದೇ ನಾಣ್ಯದ ಎರಡು ಮುಖಗಳು. ಅವೆರಡರಲ್ಲಿ ಅವಿನಾಭಾವ ಸಂಬಂಧವಿರುವುದು.

**'ಕನ್ನಡಿಯ ನೋಡುವ ಅಣ್ಣಗಳಿರಾ,**
**ಜಂಗಮವ ನೋಡಿರೆ,**
**ಜಂಗಮದೊಳಗೆ ಲಿಂಗಯ್ಯ ಸನ್ನಿಹಿತನಾಗಿಪ್ಪ'**

ಸಾಕಷ್ಟು ಆಸ್ತಿ ಗಳಿಸಿ ವೈಭವದ ಜೀವನ ನಡೆಸುತ್ತಿದ್ದ ಶ್ರೀಮಂತರಿಗೆ ಬಸವಣ್ಣನವರು ಕಿರಿ ಮಾತು ಹೇಳಿದ್ದಾರೆ. ಸಮಾಜ ಬಾಂಧವರಲ್ಲಿ ಲಿಂಗದೇವನು ಮನೆ ಮಾಡಿಕೊಂಡಿದ್ದಾನೆ. ಸಮಾಜ ಸೇವೆಯೇ ಈಶ ಸೇವೆ. ಗುಡಿಗುಂಡಾರಗಳಲ್ಲಿ ವೈಭವದ ಪೂಜೆ ಪುರಸ್ಕಾರಕ್ಕೆ ಖರ್ಚು ಮಾಡುವ ಬದಲು ದಾಸೋಹ ಕೈಂಕರ್ಯಕ್ಕೆ ಕೈ ಜೋಡಿಸಬೇಕೆಂದು ಕೇಳಿಕೊಂಡಿದ್ದಾರೆ.

**'ಪಾಪಿಯ ಧನ ಪ್ರಾಯಶ್ಚಿತ್ತಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯಾ,**
**ನಾಯಿಯ ಹಾಲು ನಾಯಿಕುನ್ನಿಗಲ್ಲದೆ ಪಂಚಾಮೃತಕ್ಕೆ ಸಲ್ಲದಯ್ಯಾ'**

ಸತ್ಯಶುದ್ಧ ಕಾಯಕದಿಂದ ಗಳಿಸಿದುದು ಮಾತ್ರ ದಾಸೋಹಕ್ಕೆ ಯೋಗ್ಯವೆಂದು ಹೇಳಿ ಬಸವಣ್ಣನವರು ಸತ್ಯಶುದ್ಧ ಕಾಯಕದಲ್ಲಿ ತೊಡಗಿಸಿಕೊಳ್ಳಲು ಎಲ್ಲರಿಗೂ ಕರೆಯಿತ್ತರು. ಸತ್ಯಶುದ್ಧ ಕಾಯಕ ಮತ್ತು ದಾಸೋಹ ಪ್ರಕ್ರಿಯೆಗಳಿಂದ ಸದೃಢ ಸುಖಿ ಸಮಾಜ ನಿರ್ಮಾಣವೆಂಬುದನ್ನು ಬಸವಣ್ಣನವರು ಪ್ರತ್ಯಕ್ಷ ಸಾಧಿಸಿ ತೋರಿಸಿದರು. 'ಎಲ್ಲರೂ ಕೊಡುವವರೇ ಆಗಿ ಬೇಡುವವರೇ ಇಲ್ಲದೆ ಬಡವಾದೆನಯ್ಯಾ' ಎಂದು ಉದ್ಗಾರ ತೆಗೆದಿದ್ದಾರೆ.

**'ಕಾಗೆಯೊಂದಗುಳ ಕಂಡಡೆ ಕರೆಯದೆ ತನ್ನ ಬಳಗವನು?**
**ಕೋಳಿ ಒಂದು ಕುಟುಕ ಕಂಡಡೆ ಕರೆಯದೆ ತನ್ನ ಕುಲವನೆಲ್ಲ?**

ದಾಸೋಹ ಪಕ್ಷಿಗಳಾದ ಕಾಗೆ ಕೋಳಿಗಳ ಉದಾಹರಣೆ ನೀಡಿ ನೀವು ಕೂಡ ಕೂಡಿ ಉಣ್ಣುವ ಕೂಡಿ ಬಾಳುವ ದಾಸೋಹ ಸಂಸ್ಕೃತಿ ಬೆಳೆಸಿಕೊಳ್ಳಬೇಕೆಂದು ಹೇಳಿದ್ದಾರೆ. ದಾಸೋಹಕ್ಕೆ ಸಂಗ್ರಹವಾದ ಸಂಪತ್ತನ್ನು ಸರಿಯಾಗಿ ಬಳಸಬೇಕು, ಸಾವಿರಾರು ಕೈಗಳು ಬೆವರು ಸುರಿಸಿ ಗಳಿಸಿದ ದೇವ ಪ್ರಸಾದವನ್ನು ಪೋಲು ಮಾಡಬಾರದು, ಹೋಮ ಹವನಾದಿಗಳ ನೆಪದಲ್ಲಿ ಪ್ರಸಾದವನ್ನು ಅಗ್ನಿಗಾಹುತಿ ಮಾಡುವುದನ್ನು ಪ್ರಾಣಿ ಬಲಿಯನ್ನೂ ಬಸವಣ್ಣನವರು ನಿಷ್ಠುರವಾಗಿ ಖಂಡಿಸಿದರು.

ಆಧುನಿಕ ಕಾಲದಲ್ಲಿ ಸರಕಾರದ ತೆರಿಗೆ ಪದ್ಧತಿಯು ದಾಸೋಹ ತತ್ತ್ವದ ಆಚರಣೆಯೇ ಆಗಿದೆ. ಸರಿಯಾಗಿ ವಂಚನೆಯಿಲ್ಲದ ತೆರಿಗೆ ನೀಡುವುದರ ಮೂಲಕ ನಾಗರಿಕರು ತಮ್ಮ ಸಾಮಾಜಿಕ ಜವಾಬ್ದಾರಿ ನಿರ್ವಹಿಸಿದಂತಾಗುತ್ತದೆ. ಈಗ ಸರಕಾರ ನಡೆಸುತ್ತಿರುವ ಶಾಲಾ ಮಕ್ಕಳಿಗೆ ಅಕ್ಷರ ದಾಸೋಹ, ಮಧ್ಯಾಹ್ನದ ಊಟ ಮತ್ತು ಅನೇಕ ಸಮಾಜಮುಖಿ ಕಾರ್ಯಕ್ರಮಗಳು ಬಸವ ತತ್ತ್ವದ ಆಚರಣೆಯೇ ಆಗಿರುವುದು. ಬಸವ ಪ್ರಣೀತ ಲಿಂಗಾಯತ ಮಠಗಳಲ್ಲಿ ಮೊದಲಿನಿಂದಲೂ ಅಕ್ಷರ ದಾಸೋಹ, ಅನ್ನ ದಾಸೋಹಗಳು ನಡೆಸುತ್ತ ಬಂದಿರುವುದನ್ನು ಕಾಣಬಹುದು. ಹಳ್ಳಿಯ ರೈತರು ತಮ್ಮ ಹೊಲದಲ್ಲಿ ಬೆಳೆದಿದ್ದರಲ್ಲಿ ಒಂದು ಪಾಲನ್ನು ಮೊದಲು ಮಠಗಳಿಗೆ ಒಪ್ಪಿಸುವ ಪರಿಪಾಠ ಈಗಲೂ ಇರುವುದನ್ನು ನೋಡಬಹುದು.

## ಸಮಾನತೆ

ಜಾತಿ ವರ್ಗ ವರ್ಣ ರಹಿತ ಸರ್ವಸಮಾನತೆಯ ಸಮಾಜ ನಿರ್ಮಾಣವೇ ಬಸವಣ್ಣನವರ ಗುರಿಯಾಗಿತ್ತು. ಜೀವನದ ಎಲ್ಲ ರಂಗಗಳಲ್ಲಿ ಸಮಾನತೆ, ಎಲ್ಲರಿಗೂ ಸ್ವಾತಂತ್ರ್ಯ ತರುವುದೇ ಅವರ ಉದ್ದೇಶವಾಗಿತ್ತು.

**ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ**
**ಆಸೆಯಾಮಿಷರೋಷಹರುಷ ವಿಷಯಾದಿಗಳೆಲ್ಲ ಒಂದೇ,**



**ಸಪ್ತಧಾತು ಸಮಂಪಿಂಡಂ ಸಮಯೋನಿ ಸಮದ್ಭವಂ ।**
**ಆತ್ಮ ಜೀವ ಸಮಾಯುಕ್ತಂ ವರ್ಣಾನಾಂ ಕಿಂ ಪ್ರಯೋಜನಂ ॥**

ಎಲ್ಲರೂ ಹುಟ್ಟುವುದು ಒಂದೇ ರೀತಿ. ಹುಟ್ಟು ಸಾವು ಎಲ್ಲರಿಗೂ ಸಮಾನವಾದವು. 'ಕೊಲ್ಲುವವನೇ ಮಾದಿಗ ಹೊಲಸು ತಿಂಬುವವನೇ ಹೊಲೆಯ', 'ಸಕಲ ಜೀವಾತ್ಮರಿಗೆ ಲೇಸನು ಬಯಸುವವನೇ ಕುಲಜನು' ಎಂದು ಹೇಳಿದ ಬಸವಣ್ಣನವರು ಜಾತಿಭೇದವನ್ನು ತೀವ್ರವಾಗಿ ವಿರೋಧಿಸಿ ಜಾತಿಗಳನ್ನೇ ನಿರಸನಗೈದರು. ಅಪ್ಪನು ನಮ್ಮ ಮಾದಾರ ಚೆನ್ನಯ್ಯ, ಬೊಪ್ಪನು ನಮ್ಮ ಡೋಹರ ಕಕ್ಕಯ್ಯ' ಎಂದು ತುಳಿತಕ್ಕೊಳಗಾದವರನ್ನು ಮೇಲೆತ್ತಿದರು. 'ಕುಲಕ್ಕೆ ತಿಲಕ ನಮ್ಮ ಮಾದಾರ ಚೆನ್ನಯ್ಯನು', 'ಮಾದಾರ ಚೆನ್ನಯ್ಯನ ಗೋತ್ರದವ ನಾನು, ಚೆನ್ನಯ್ಯನ ಮಗ ನಾನು.' ಎಂದು ಅವರಲ್ಲಿ ಆತ್ಮವಿಶ್ವಾಸ ತುಂಬಿದರು.

**ಶೆಟ್ಟಿಯೆಂಬೆನೆ ಸಿರಿಯಾಳನ?**
**ಮಡಿವಾಳನೆಂಬೆನೆ ಮಾಚಯ್ಯನ?**
**ಡೋಹರನೆಂಬೆನೆ ಕಕ್ಕಯ್ಯನ?**
**ಮಾದರನೆಂಬೆನೆ ಚೆನ್ನಯ್ಯನ?**
**ಆನು ಹಾರುವನೆಂದಡೆ ಕೂಡಲ ಸಂಗಯ್ಯ ನಗುವನಯ್ಯಾ**

ಮಾಡುವ ಕಾಯಕಗಳೆಲ್ಲವೂ ಒಂದೇ ಕಾಯಕಗಳೆಲ್ಲವೂ ಪವಿತ್ರವಾದವುಗಳೆಂದು ಹೇಳಿ ಬಸವಣ್ಣನವರು ಕಾಯಕ ಭೇದವನ್ನು ತೊಡೆದು ಹಾಕಿದರು.

**'ನೆಲನೊಂದೆ ಹೊಲಗೇರಿ ಶಿವಾಲಯಕೆ, ಜಲನೊಂದೆ ಶೌಚಾಚಮನಕ್ಕೆ'**

ನಡೆವ ಭೂಮಿ, ಕುಡಿವ ನೀರು, ಸುಡುವ ಅಗ್ನಿ, ಉಸಿರಾಡುವ ಗಾಳಿ ಎಲ್ಲರಿಗೂ ಒಂದೇ ಎಂದು ಹೇಳಿ ಜಾತಿವಾದಿಗಳನ್ನು ತರಾಟೆಗೆ ತೆಗೆದುಕೊಂಡರು.

**'ಇವನಾರವ ಇವನಾರವ ಇವನಾರವ ಎಂದೆನಿಸದಿರಯ್ಯಾ**
**ಇವನಮ್ಮವ ಇವನಮ್ಮವ ಇವ ನಮ್ಮವ ಎಂದೆನಿಸಯ್ಯಾ'**

ಇವನಾರವ ಇವನಾರವ ಎಂಬ ಭೇದವೆಣಿಸದೆ ಬಸವಣ್ಣನವರು ಎಲ್ಲರನ್ನೂ ಅಪ್ಪಿಕೊಂಡು ವಿಶ್ವ ಭ್ರಾತೃತ್ವ ಮೆರೆದರು. ಮಂತ್ರಿಯಾಗಿದ್ದರೂ ಮಾದಾರ ಚೆನ್ನಯ್ಯನ ಮನೆಗೆ ಹೋಗಿ ಅಂಬಲಿ ಕುಡಿದರು. ಕಂಬಳಿ ನಾಗಿದೇವನ ಮನೆಯಲ್ಲಿ ಲಿಂಗಪೂಜೆ ಮಾಡಿಕೊಂಡು ಪ್ರಸಾದ ಸ್ವೀಕರಿಸಿದರು.

**'ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳನಿಕ್ಕುವೆ,**
**ತರ್ಕದ ಬೆನ್ನಬಾರನೆತ್ತುವೆ, ಆಗಮದ ಮೂಗ ಕೊಯಿವೆ'**

ವೇದ ಶಾಸ್ತ್ರ ಪುರಾಣ ತರ್ಕ ಆಗಮಗಳನ್ನು ಮುಂದಿಟ್ಟುಕೊಂಡು ಜಾತಿಭೇದ ಲಿಂಗಭೇದ ಎಣಿಸುತ್ತ ಅಹಂಕಾರದಿಂದ ಮೆರೆಯುತ್ತಿದ್ದ ಪುರೋಹಿತಶಾಹಿಗಳ ಟೀಕೆಗೆ ಧೈರ್ಯದಿಂದ ಎದೆಗೊಟ್ಟು ನಿಂತಿ ತಿರುಗೇಟು ನೀಡಿದರು.

**ತನ್ನಾಶ್ರಯದ ರತಿ ಸುಖವನು ತಾನುಂಬ ಊಟವನು**
**ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ?**

ದೇವರಿಗೂ ಭಕ್ತರಿಗೂ ನಡುವೆ ದಳ್ಳಾಲಿಯೆಂಬ ಪೂಜಾರಿ ಪುರೋಹಿತ ಶಾಹಿಯನ್ನು ಬಸವಣ್ಣನವರು ತಿರಸ್ಕರಿಸಿದರು. ಪುರೋಹಿತ ಶ್ರೇಷ್ಠ ಭಕ್ತ ಕನಿಷ್ಠ ಭೇದವನ್ನು ತೊಡೆದು ಹಾಕಿದರು. ಎಲ್ಲರೂ ದೇವಾರ್ಚನೆಗೆ ಅರ್ಹರೆಂದು ತಿಳಿಸಿದರು. ಪುರೋಹಿತ ಶಾಹಿ ಬೆಳೆಸುವ ಸ್ಥಾವರ ಪೂಜೆ ಗುಡಿ ಸಂಸ್ಕೃತಿಯನ್ನೇ ಧಿಕ್ಕರಿಸಿದರು. 'ಎನ್ನ ಕಾಲೇ ಕಂಬ ದೇಹವೇ ದೇಗುಲ' ಎಂದು ತಿಳಿಸಿ ದೇಹವನ್ನೇ ದೇವಾಲಯವಾಗಿಸಿದರು. ವಿಶ್ವಾತ್ಮ ದೇವರ ಕುರುಹಾದ ಇಷ್ಟಲಿಂಗವನ್ನು ಕರುಣಿಸಿ ಎಲ್ಲರಿಗೂ ದೇವೋಪಾಸನೆಯ ಅವಕಾಶ ಕಲ್ಪಿಸಿದರು. ಸಮಾಜದಲ್ಲಿ ಬೇರೂರಿದ್ದ ಮೂಢನಂಬಿಕೆ, ಡಂಭಾಚಾರ, ಕಂದಾಚಾರಗಳನ್ನು ಕಿತ್ತೆಸೆದರು. ಎಲ್ಲರೂ ಅನುಸರಿಸಬೇಕಾದ ಸಪ್ತಸೂತ್ರಗಳನ್ನು ಪಂಚ ಆಚಾರಗಳನ್ನು ತಿಳಿಸಿದರು. ನೀರ ಕಂಡಲ್ಲಿ ಮುಳುಗುವರಯ್ಯಾ, ಮರನ ಕಂಡಲ್ಲಿ ಸುತ್ತುವರಯ್ಯಾ', ಕಲ್ಲನಾಗರ ಕಂಡರೆ ಹಾಲನೆರೆಯೆಂಬರು, ದಿಟ ನಾಗರ ಕಂಡರೆ ಕೊಲ್ಲೆಂಬರಯ್ಯಾ' ಮೂಢನಂಬಿಕೆಗಳನ್ನು ತೊಡೆದು ಹಾಕಿ ವೈಚಾರಿಕ ಪ್ರಜ್ಞೆ ಬೆಳೆಸಿದರು.

**ಕಲ್ಲಿಯ ಹಾಕಿ ನೆಲ್ಲವ ತುಳಿದು**
**ಗುಬ್ಬಿಯ ಸಿಕ್ಕಿಸುವ ಕಳ್ಳನಂತೆ**
**ಸಂಸ್ಕೃತದ ಮಾತಿನ ಪಸರವ ಮುಂದೆ ಇಕ್ಕಿಕೊಂಡು**
**.......................................**
**ಅದೇತರ ನುಡಿ? ಮಾತಿನ ಮರೆ**
**ಆತುರ ವೈರಿ ಮಾರೇಶ್ವರಾ.**

ಸಂಸ್ಕೃತವೊಂದೇ ದೇವ ಭಾಷೆಯೆಂದು ಬಿಂಬಿಸಿ ಅದನ್ನು ಜನಸಾಮಾನ್ಯರಿಂದ ದೂರೀಕರಿಸಿ ಪುರೋಹಿತಶಾಹಿಗಳು ಜನ ಸಾಮಾನ್ಯರನ್ನು ಸುಲಿಗೆ

ಮಾಡುತ್ತಿದ್ದ ರೀತಿಯನ್ನು ಶರಣ ನಗೆಮಾರಿ ತಂದೆ ಖಂಡಿಸಿದುದು ಗಮನಾರ್ಹವಾಗಿದೆ. ಬಸವಾದಿ ಶರಣರು ನೆಲದ ಭಾಷೆ ಜನಸಾಮಾನ್ಯರ ಭಾಷೆಯಾದ ಕನ್ನಡವನ್ನೇ ದೇವಭಾಷೆಯಾಗಿಸಿದರು. ಕನ್ನಡದಲ್ಲಿ ವಚನಗಳನ್ನೂ ಮಂತ್ರಗಳನ್ನೂ ರಚಿಸಿ ಕನ್ನಡವನ್ನು ಶ್ರೀಮಂತ ಗೊಳಿಸಿದರು.

**ಒಡೆಯನಿರಿಸಿದಂತಿರ್ಪುದಲ್ಲದೆ ಪೇಳೊಡವೆಗೆ ಬೇರಿರವುಂಟೆ?**

ಹೆಣ್ಣು ಪುರುಷನ ಒಡವೆಯೆಂದೂ ಅವನು ಇರಿಸಿದಂತೆ ಇರಬೇಕೆಂದೂ ತಿಳಿದುಕೊಂಡಿದ್ದ ಆ ಕಾಲದ ಸಾಮಾಜಿಕ ಕಟ್ಟಳೆಯನ್ನು ಕೂಡಿದೊಗೆದು ಬಸವಣ್ಣನವರು ಸ್ತ್ರೀಯರಿಗೆ ಸಾಮಾಜಿಕ ಧಾರ್ಮಿಕ ಎಲ್ಲ ಕ್ಷೇತ್ರಗಳಲ್ಲೂ ಪುರುಷರಷ್ಟೇ ಸ್ವಾತಂತ್ರ್ಯ ನೀಡಿದರು. ಜಗತ್ತಿನ ಇತಿಹಾಸದಲ್ಲಿ ಸ್ತ್ರೀ ಸ್ವಾತಂತ್ರ್ಯ ಪ್ರತಿಪಾದಕರಲ್ಲಿ ಬಸವಣ್ಣನವರು ಪ್ರಥಮರಾಗಿದ್ದಾರೆ.

**'ಮೊಲೆ ಮುಡಿ ಬಂದಡೆ ಹೆಣ್ಣೆಂಬರು, ಮೀಸೆ ಕಾಸೆ ಬಂದಡೆ ಗಂಡೆಂಬರು'**

ಬಾಹ್ಯ ರಚನೆಯಲ್ಲಿ ಹೆಣ್ಣು ಗಂಡು ಭೇದ ತೋರಿದರೂ ಒಳಗಿರುವ ಆತ್ಮ ಹಾಗೂ ಜ್ಞಾನ ಮಾತ್ರ ಒಂದೇ ಎಂದು ಶರಣೆ ಗೊಗ್ಗವ್ವೆ ಮತ್ತು ಶರಣೆ ಸತ್ಯಕ್ಕ ಪ್ರತಿಪಾದಿಸಿದ್ದಾರೆ. ಬಸವಣ್ಣನವರ ಅನುಭವ ಮಂಟಪದ ಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದ ಶರಣೆಯರು ಕ್ರಾಂತಿಕಾರಕ ವಚನಗಳನ್ನು ಬರೆದಿದ್ದಾರೆ. ಶರಣೆ ಅಕ್ಕಮಹಾದೇವಿ, ಕಾಳವ್ವೆ, ಗೊಗ್ಗವ್ವೆ, ಸತ್ಯಕ್ಕ ಮೊದಲಾದವರು ಪಟ್ಟಭದ್ರ ವ್ಯವಸ್ಥೆಯ ವಿರುದ್ಧ ವಚನ ರಚನೆಯ ಮೂಲಕ ಬಂಡಾಯ ಸಾರಿದ್ದಾರೆ. ಬಸವಣ್ಣನವರು ಸ್ತ್ರೀಯರನ್ನು ಮಹಾದೇವಿಯರೆಂದು ಕರೆದಿದ್ದಾರೆ. 'ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ' ಎಂದು ಶಿವಯೋಗಿ ಸಿದ್ಧರಾಮಯ್ಯ ತಿಳಿಸಿದ್ದಾರೆ. 'ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂದು ಹೇಳಿದ ಬಸವಾದಿ ಶರಣರು ಗೃಹಸ್ಥ ಜೀವನವೂ ಮುಕ್ತಿಗೆ ಸೋಪಾನವೆಂದು ತಿಳಿಸಿದ್ದಾರೆ.

ಬಸವಣ್ಣನವರ ಸಾಮಾಜಿಕ ವ್ಯವಸ್ಥೆಯಲ್ಲಿ ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು ಎಂಬುದಾಗಿತ್ತು. ಮುಖ ನೋಡಿ ಮಣೆ ಹಾಕುವುದನ್ನು ಅವರು ವಿರೋಧಿಸಿದರು. ಎಲ್ಲರೂ ತಮ್ಮ ಸಾಮಾಜಿಕ ಜವಾಬ್ದಾರಿಯನ್ನು ಕಟ್ಟು ನಿಟ್ಟಾಗಿ ಪಾಲಿಸಬೇಕೆಂಬುದು ಅವರ ನಿಯಮವಾಗಿತ್ತು. ಈ ನಿಯಮಗಳ ಅನುಷ್ಠಾನಕ್ಕೆ ಒಂದು ಜಂಗಮ ಪಡೆಯನ್ನು ನಿರ್ಮಿಸಿದ್ದರು. ಈಗಲೂ ದಾಸೋಹ ಪ್ರಕ್ರಿಯೆಗೆ ಕೋರಾನ್ನ ಭಿಕ್ಷೆ, ಕಂತೀ ಭಿಕ್ಷೆಗೆ ಬರುವ ಜಂಗಮರನ್ನೂ, ಸಮಾಜದ ಅಂಕುಡೊಂಕು ತಿದ್ದಿ ನೈತಿಕ ನೆಲೆಗಟ್ಟಿಗೆ ಹಚ್ಚುವ ಮುಳ್ಳಾವಿಗೆ ಕಾಯಕದ ಜಂಗಮರನ್ನೂ ನೋಡಬಹುದು. ಒಟ್ಟಾರೆ ಸುಲಿಗೆ ಶೋಷಣೆ ರಹಿತ ಅನ್ಯಾಯದಿಂದ ಮುಕ್ತವಾದ ಸುಖಿ ಸಮಾಜ ನಿರ್ಮಾಣವೇ ಬಸವಣ್ಣನವರ ಗುರಿಯಾಗಿತ್ತು.

ಬಸವಣ್ಣನವರ ಸಾಮಾಜಿಕ ವ್ಯವಸ್ಥೆಯು ಜಗತ್ತಿಗೇ ಮಾದರಿಯಾಗಿತ್ತು. ಸಮಾಜ ಹಿತಕ್ಕಾಗಿ ಅವರು ರೂಪಿಸಿದ ಬಹುಪಾಲು ಅಂಶಗಳು ಇಂದು ನಮ್ಮ ರಾಷ್ಟ್ರದ ಸಂವಿಧಾನದಲ್ಲಿರುವುದನ್ನು ಕಾಣುತ್ತೇವೆ. ಅವರ ಸಿದ್ಧಾಂತಗಳು ಸಾರ್ವಕಾಲಿಕವಾಗಿವೆ. ೧೩ನೇ ಶತಮಾನ ದಲ್ಲಿ ಇಂಗ್ಲೆಂಡಿನಲ್ಲಿ ಪ್ರಥಮ ಸಂವಿಧಾನವೊಂದು ನಿರ್ಮಾಣವಾಯಿತೆಂದು ಇತಿಹಾಸಕಾರರು ಹೇಳುತ್ತಾರೆ. ಆದರೆ ೧೨ನೇ ಶತಮಾನದ ಶರಣರ ವಚನಗಳಲ್ಲಿ ಸಂವಿಧಾನದ ಎಲ್ಲ ಅಂಶಗಳೂ ಇರುವುದನ್ನು ನೋಡಬಹುದು. ಶ್ರೇಷ್ಠ ಚಿಂತಕರಾದ ಸರ್ ಜೇಮ್ಸ್ ಕ್ಯಾಂಪ್‌ಬೆಲ್ ಅವರು ಆಧುನಿಕ ಚಿಂತಕರೆಲ್ಲ ಬಸವಣ್ಣನವರ ವಿಚಾರಗಳನ್ನೇ ಮಾರ್ನುಡಿ ಯುತ್ತಾರೆಂದೂ ಈಗ ಭಾರತದಲ್ಲಿ ನಡೆಯುತ್ತಿರುವ ಸುಧಾರಣೆಗಳು ಬಸವ ತತ್ತ್ವ ವಿಚಾರಗಳ ಪ್ರತಿಬಿಂಬವೇ ಆಗಿದೆ ಎಂದೂ ಹೇಳಿದ್ದಾರೆ. ಇನ್ನೊಬ್ಬ ಪಾಶ್ಚಾತ್ಯ ತತ್ತ್ವಜ್ಞಾನಿ ಅರ್ಥರ್ ಮೈಲ್ಸ್ ಅವರು ಬಸವಣ್ಣ ಭಾರತದ ಪ್ರಪ್ರಥಮ ಸ್ವತಂತ್ರ ವಿಚಾರವಾದಿ ಎಂದು ಕೊಂಡಾಡಿದ್ದಾರೆ. 'ನನ್ನ ಪ್ರಜಾರಾಜ್ಯ ಕಲ್ಪನೆಗೆ ಮೂಲ ಪ್ರೇರಣೆ ನೀಡಿದವರು ೮೦೦ ವರ್ಷಗಳ ಹಿಂದೆ ಅನುಭವ ಮಂಟಪ ಕಟ್ಟಿದ ಬಸವಣ್ಣನವರಾಗಿದ್ದಾರೆ' ಎಂದು ೧೯೨೪ರಲ್ಲಿ ಬೆಳಗಾವಿಯ ಕಾಂಗ್ರೆಸ್ ಅಧಿವೇಶನದ ಕಾಲಕ್ಕೆ ಗಾಂಧಿಯವರು ಹೇಳಿದ್ದನ್ನು ಉದಾಹರಿಸುತ್ತ ಇಂಗ್ಲೆಂಡಿನ ಖ್ಯಾತ ಇತಿಹಾಸಕಾರ ರಿಚಾರ್ಡ್ ಬ್ಲರ್ಟನ್ ಅವರು 'ಜಗತ್ತಿನಲ್ಲಿ ಪ್ರಜಾಪ್ರಭುತ್ವಕ್ಕೆ ಬೀಜ ಬಿತ್ತಿದವ ಬಸವಣ್ಣ' ಎಂದು ಸ್ಪಷ್ಟವಾಗಿ ತಿಳಿಸಿದ್ದಾರೆ. ಕನ್ನಡಿಗರಿಗೆ ಇದು ಅತ್ಯಂತ ಹೆಮ್ಮೆಯ ಸಂಗತಿಯಾಗಿದೆ.



ವರದಿ

# ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಪುರದಪಾಳ್ಯದಲ್ಲಿ ಶ್ರೀ ಬಸವೇಶ್ವರಸ್ವಾಮಿ ಪುನರ್‌ಪ್ರತಿಷ್ಠಾಪನೆ, ದೇವಾಲಯ ಜೀರ್ಣೋದ್ಧಾರ ಹಾಗೂ ನಂದಿ ಗೋಶಾಲಾ ಲೋಕಾರ್ಪಣೆ

ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ಆಶೀರ್ವಚನ

ಬೆಂಗಳೂರು ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿ, ಪುರದಪಾಳ್ಯ ಪುಣ್ಯ ಗ್ರಾಮದಲ್ಲಿ ಮೇ ೯, ೨೦೧೮ ರಂದು ಶ್ರೀ ಬಸವೇಶ್ವರ ಸ್ವಾಮಿ ಸೇವಾ ಟ್ರಸ್ಟ್ ಆಶ್ರಯದಲ್ಲಿ ಸು. ೬೦೦ ವರ್ಷಗಳ ಭವ್ಯ ಇತಿಹಾಸವಿರುವ ಶ್ರೀ ಬಸವೇಶ್ವರಸ್ವಾಮಿ ಪುನರ್ ಪ್ರತಿಷ್ಠಾಪನೆ ಹಾಗೂ ದೇವಾಲಯದ ಜೀರ್ಣೋದ್ಧಾರ ಮತ್ತು ನಂದಿ ಗೋಶಾಲಾ ಲೋಕಾರ್ಪಣೆ ಕಾರ್ಯಕ್ರಮವನ್ನು ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ನೆರವೇರಿತು.

ಸಮಾರಂಭದಲ್ಲಿ ಶ್ರೀ ಮಹಾಂತೇಶ್ವರ ಗದ್ದಿಗೆ ಮಠದ ಪೂಜ್ಯ ಶ್ರೀ ಶ್ರೀ ಮಹಾಂತಸ್ವಾಮಿಗಳು, ಶ್ರೀ ಕಂಚುಗಲ್ ಬಂಡೇಮಠದ ಪೂಜ್ಯ ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳು, ನೆಲಮಂಗಲದ ಶ್ರೀ ಪವಾಡ ಬಸವಣ್ಣದೇವರ ಮಠದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಗುಡೇಮಾರನಹಳ್ಳಿ ಜಗನ್ನಯ್ಯ ಮಠದ ಪೂಜ್ಯ ಶ್ರೀ ಶ್ರೀ ಚನ್ನಬಸವ ಸ್ವಾಮಿಗಳುವರ ದಿವ್ಯ ಸಮ್ಮುಖದಲ್ಲಿ ಶ್ರೀಮತಿ ಶೈಲಜಾ ಸೋಮಣ್ಣನವರು ಜ್ಯೋತಿ ಬೆಳಗಿಸುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು.

ಇದೇ ಸಂದರ್ಭದಲ್ಲಿ ತ್ರಿವಿಧ ದಾಸೋಹಿ, ಪದ್ಮಭೂಷಣ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪುಣ್ಯಸ್ಮರಣೆ ಮಾಡಲಾಯಿತು. ಪರಮಪೂಜ್ಯ ಶ್ರೀ ಶ್ರೀಗಳವರನ್ನು ಕುರಿತು ತುಮಕೂರು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ವಿದ್ವಾನ್ ಶ್ರೀ ಎಂ.ಜಿ. ಸಿದ್ಧರಾಮಯ್ಯನವರು ನುಡಿನಮನದಲ್ಲಿ 'ಅವರೊಬ್ಬರು ದೇವಮಾನವ' ಎಂದು ಬಣ್ಣಿಸಿದರು.

'ಬಿಟ್ಟು ಹೋಗುವುದಕ್ಕಿಂತ ಕೊಟ್ಟು ಹೋಗುವುದು ಲೇಸು' ಎಂಬ ಅನುಭಾವಿಗಳ, ದಾರ್ಶನಿಕರ ದಿವ್ಯವಾಣಿಯನ್ನು ಜೀವನದಲ್ಲಿ ಅಳವಡಿಸಿಕೊಂಡು, ಸರಳತೆ, ಸಜ್ಜನಿಕೆ, ಹೃದಯವಂತಿಕೆ, ಪರೋಪಕಾರ, ಕರುಣೆ, ನಿಸ್ವಾರ್ಥತೆಯನ್ನು



ಶ್ರೀಮತಿ ತ್ರಿವೇಣಿ ಮತ್ತು ಶ್ರೀ ಎನ್.ಎಂ. ಶಿವಕುಮಾರ್ ದಂಪತಿಗಳಿಂದ ನಂದಿ ಗೋಶಾಲೆ ಲೋಕಾರ್ಪಣೆ

ಮೈಗೂಡಿಸಿಕೊಂಡಿರುವ ಖ್ಯಾತ ಕೈಗಾರಿಕೋದ್ಯಮಿಗಳೂ, ಲಯನ್ಸ್ ಕ್ಲಬ್ ಆಫ್ ಜ್ಞಾನಯೋಗದ ಸಂಸ್ಥಾಪಕ ಅಧ್ಯಕ್ಷರಾದ ಶ್ರೀ ಎನ್.ಎಂ. ಶಿವಕುಮಾರ್ ಅವರು ಪುರದಪಾಳ್ಯದಲ್ಲಿ ನಂದಿ ಗೋಶಾಲೆ ನಿರ್ಮಾಣವಾಗಲು ಮುಕ್ತ ಮನಸ್ಸಿನಿಂದ ನೆರವು ನೀಡಿದ್ದಾರೆ. ಅವರಿಂದಲೇ ಗೋಶಾಲೆಯನ್ನು ಲೋಕಾರ್ಪಣೆ ಮಾಡಿಸಬೇಕು ಎಂಬ ಪುರದಪಾಳ್ಯದ ನಾಗರಿಕರ ಆಶಯವನ್ನು ಶ್ರೀ ಎನ್.ಎಂ. ಶಿವಕುಮಾರ್ ಅವರು ಪ್ರೀತಿಯಿಂದ ನೆರವೇರಿಸಿದರು. ಈ ಸಂದರ್ಭದಲ್ಲಿ ಅವರು ಮಾತನಾಡಿ ನಂದಿ ಗೋಶಾಲೆಯನ್ನು ನಿರ್ಮಾಣ ಮಾಡಲು ಸದಾವಕಾಶವನ್ನು ಕಲ್ಪಿಸಿಕೊಟ್ಟ ಶ್ರೀ ಬಸವೇಶ್ವರಸ್ವಾಮಿ ಸೇವಾ ಟ್ರಸ್ಟ್‌ನ ಎಲ್ಲಾ ಪದಾಧಿಕಾರಿಗಳಿಗೆ ಕೃತಜ್ಞತೆಗಳನ್ನು ಸಲ್ಲಿಸಿ, ಇದು ನನ್ನ ಜೀವನದಲ್ಲಿ ಸ್ಮರಣೀಯವಾದ ದಿನ' ಎಂದು ಹೇಳಿದರು. ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಶ್ರೀ ಶಿವಕುಮಾರ್ ಅವರನ್ನು ಸನ್ಮಾನಿಸಿ ಆಶೀರ್ವದಿಸಿದರು.

ಗದ್ದುಗೆ ಮಠದ ಪೂಜ್ಯ ಶ್ರೀ ಶ್ರೀ ಮಹಾಂತಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ "ಶ್ರೀ ಬಸವೇಶ್ವರಸ್ವಾಮಿ ದೇಗುಲ ನಿರ್ಮಾಣ ಮಾಡುವುದರ ಮೂಲಕ ಪುರದಪಾಳ್ಯ ಗ್ರಾಮ ಪಾವನವಾಗಿದೆ. ಬಸವಣ್ಣನವರ ಆದರ್ಶಗಳನ್ನು ನಾವು ಪಾಲಿಸಬೇಕು, ಮಕ್ಕಳನ್ನು ಒಳ್ಳೆಯ ರೀತಿಯಲ್ಲಿ ಬೆಳಸಬೇಕು. ಅವರನ್ನು ಸಂಸ್ಕಾರವಂತರನ್ನಾಗಿ ಮಾಡಬೇಕು. ಅದೇ ನಾವು ಸಮಾಜಕ್ಕೆ ನೀಡುವ ಬಹುದೊಡ್ಡ ಕೊಡುಗೆ" ಎಂದು ಹೇಳಿದರು.

ಇದೇ ಸಂದರ್ಭದಲ್ಲಿ ಶ್ರೀ ಕಂಚುಗಲ್ ಬಂಡೇಮಠದ ಶ್ರೀಗಳು, ಶ್ರೀ ಪವಾಡ ಬಸವಣ್ಣದೇವರ ಮಠದ ಶ್ರೀಗಳು, ಜಗನ್ನಯ್ಯನ ಮಠದ ಶ್ರೀಗಳು ಮಾತನಾಡಿ ಕೆಲವು ಉಪಯುಕ್ತ ಸಲಹೆಗಳನ್ನು ನೀಡಿದರು.

ದಿವ್ಯಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ "ಬೆಂಗಳೂರು ಮಹಾನಗರದ ಸೆರಗಿನಲ್ಲಿದ್ದರೂ ಪುರದಪಾಳ್ಯ ಗ್ರಾಮೀಣ ಸೊಗಡನ್ನು ಉಳಿಸಿಕೊಂಡು ಬಂದಿರುವುದಕ್ಕೆ ಮೆಚ್ಚುಗೆಯನ್ನು ವ್ಯಕ್ತಪಡಿಸಿ, ಎಲ್ಲರೂ ಒಟ್ಟಾಗಿ ಬದುಕುವ ಗ್ರಾಮೀಣ ಬದುಕು ತುಂಬಾ ಮಹತ್ತರವಾದುದು. ನಿಸ್ವಾರ್ಥ ಬದುಕನ್ನು ನಡೆಸುತ್ತಿರುವ ಪುರದಪಾಳ್ಯದ ನಾಗರಿಕರು ಸುಸಂಸ್ಕೃತರು. ನೀವು ದೇವಸ್ಥಾನವನ್ನು ಕಟ್ಟಿಲ್ಲ, ಮನಸ್ಸನ್ನು ಕಟ್ಟಿದ್ದೀರಿ. ಒಂಭತ್ತು ಮನೆಗಳಿರುವ ಈ ಗ್ರಾಮ ಆದರ್ಶ ಗ್ರಾಮವಾಗಿದೆ ಎಂದರು.

ಹಿಂದೆ ದೇವಾಲಯಗಳು ಎಲ್ಲ ಸಾಮಾಜಿಕ ಬದುಕಿಗೂ ಮಹತ್ವದ ಸ್ಥಾನವನ್ನು ಕೊಡುತ್ತಾ, ಸಾಮಾಜಿಕ, ಸಾಂಸ್ಕೃತಿಕವಾಗಿ ಕೇಂದ್ರ ಸ್ಥಾನವಾಗಿತ್ತು. ಎಲ್ಲರೂ ಒಟ್ಟಾಗಿ ಸೇರಿ ದೇವಸ್ಥಾನ ಹಾಗೂ ಗೋಶಾಲೆಯನ್ನು ಕಟ್ಟುವ ಕೆಲಸ ಮಾಡಿದ್ದಕ್ಕೆ ಅಭಿನಂದಿಸಿದರು.

ಭಗವಂತನಿಗೆ ಬೇಕಾಗಿರುವುದು ಪವಿತ್ರವಾದ ಹೃದಯ ಮತ್ತು ಭಕ್ತಿ. ಯಾರ ಮನಸ್ಸು, ಹೃದಯ ಪವಿತ್ರವಾಗಿ ರುತ್ತದೆಯೋ ಅದೇ ಭಕ್ತಿ ಎನಿಸುತ್ತದೆ. ಬಸವಣ್ಣನವರ ವಚನಗಳನ್ನು ಅರ್ಥಮಾಡಿಕೊಂಡು ಜೀವನದಲ್ಲಿ ಅಳವಡಿಸಿಕೊಂಡರೆ ಬದುಕು ಸುಂದರ



ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಶ್ರೀ ಎನ್.ಎಂ. ಶಿವಕುಮಾರ್ ಅವರನ್ನು ಸನ್ಮಾನಿಸಿ ಆಶೀರ್ವದಿಸಿದರು






ಶ್ರೀ ಬಸವೇಶ್ವರಸ್ವಾಮಿ ಸೇವಾ ಟ್ರಸ್ಟ್‌ನ ಪದಾಧಿಕಾರಿಗಳಿಂದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಗೆ ಗೌರವ ಸಮರ್ಪಣೆ

ವಾಗುತ್ತದೆ. ಬದುಕಿನಲ್ಲಿ ಏನೆಲ್ಲಾ ಇದ್ದರೂ ಮನಸ್ಸಿನಲ್ಲಿ ಶಾಂತಿ ಇಲ್ಲದೇ ಹೋದರೆ ಪ್ರಯೋಜನವಾಗುವುದಿಲ್ಲ.

ಧರ್ಮ ಜೀವನದಲ್ಲಿ ಹಾಸು ಹೊಕ್ಕಾಗಿದೆ. ದಯೆ, ಪ್ರೀತಿ ಇದ್ದರೆ ಅದೇ ಧರ್ಮ. ಗೋವು ವಿಶ್ವದ ತಾಯಿ, ಗೋವು ಕಲ್ಪವೃಕ್ಷವಿದ್ದಂತೆ. ಉದಾರವಾಗಿ ಆರ್ಥಿಕ ನೆರವು ನೀಡಿ ಗೋಶಾಲೆ ನಿರ್ಮಾಣವಾಗಲು ಕಾರಣರಾದ ಶ್ರೀ ಎನ್.ಎಂ. ಶಿವಕುಮಾರ್ ಅವರ ಸೇವೆಯನ್ನು ಮುಕ್ತಕಂಠದಿಂದ ಶ್ಲಾಘಿಸಿದರು. ಕರ್ನಾಟಕದಲ್ಲಿ ಎಲ್ಲರೂ ಪ್ರೀತಿಸುವ ಸ್ವಾಮಿಗಳವರೆಂದರೆ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು. ಪೂಜ್ಯರ ಕಾಲದಲ್ಲಿ ನಾವಿದ್ದೆವು ಎನ್ನುವುದೇ ನಮ್ಮ ಪುಣ್ಯ ಎಂದು ಹೇಳಿದರು.

ವೇದಿಕೆಯಲ್ಲಿ ಉಪಸ್ಥಿತರಿದ್ದ ಹಿರಿಯ ಜಾನಪದ ವಿದ್ವಾಂಸರು, ಸಿದ್ಧಗಂಗಾ ಮಾಸಪತ್ರಿಕೆ ಸಹ ಸಂಪಾದಕರಾದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪ, ನಿವೃತ್ತ ಶಿಕ್ಷಕರಾದ ಶ್ರೀ ಶ್ರೀ ಶಾಂತವೀರಪ್ಪ, ಹಾಗೂ ಗಾಣಿಗರಪಾಳ್ಯದ ಶ್ರೀ ಮರುಳಸಿದ್ಧಪ್ಪ ಅವರನ್ನು ಸನ್ಮಾನಿಸಲಾಯಿತು.

ಕಾರ್ಯಕ್ರಮಕ್ಕೆ ಮುನ್ನ ಕಲರವ ಸಂಗೀತ ಮತ್ತು ಲಲಿತ ಕಲಾ ಅಕಾಡೆಮಿಯ ಶ್ರೀ ಎಸ್.ಕೆ. ಸಿದ್ಧರಾಮ ಮತ್ತು ತಂಡದವರಿಂದ ವಚನ ಗಾಯನ ಕಾರ್ಯಕ್ರಮ ನಡೆಯಿತು.

ಕಾರ್ಯಕ್ರಮ ಶ್ರೀ ಎಸ್.ಕೆ. ಸಿದ್ಧರಾಮ ಅವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಶ್ರೀ ಪಿ.ಸಿ. ಶಿವಶಂಕರಯ್ಯ ಅವರು ಸರ್ವರನ್ನು ಸ್ವಾಗತಿಸಿದರು. ಕರ್ನಾಟಕ ವಿಚಾರ ವೇದಿಕೆಯ ಅಧ್ಯಕ್ಷರಾದ ಶ್ರೀ ಫಾಲನೇತ್ರ ಅವರು ಕಾರ್ಯಕ್ರಮ ನಿರೂಪಿಸಿದರು.

ಸಮಾರಂಭದ ಅಂಗವಾಗಿ ಶ್ರೀ ಸಿದ್ಧಗಂಗಾ ಮಠದ ಕಲಾವಿದರಿಂದ 'ಜಗಜ್ಯೋತಿ ಶ್ರೀ ಬಸವೇಶ್ವರ' ನಾಟಕ ನಡೆಯಿತು. ಪುರದಪಾಳ್ಯದ ಗ್ರಾಮಸ್ಥರು ಸೇರಿದಂತೆ ಅಕ್ಕಪಕ್ಕದ ಗ್ರಾಮದ ಬಂಧುಗಳು ನಾಟಕವನ್ನು ವೀಕ್ಷಿಸಿ ಸಂತೋಷವನ್ನು ವ್ಯಕ್ತಪಡಿಸಿದರು.

ಸಮನ್ವಯತೆ, ಸಂಘಟನೆ, ಬದ್ಧತೆ ಇದ್ದರೆ ಕೈಗೊಂಡ ಕಾರ್ಯ ಯಶಸ್ವಿಯಾಗುತ್ತದೆ ಎಂಬುದಕ್ಕೆ ಶ್ರೀ ಬಸವೇಶ್ವರಸ್ವಾಮಿ ಸೇವಾ ಟ್ರಸ್ಟ್ ಒಂದು ಉಜ್ವಲ ನಿದರ್ಶನ. ಟ್ರಸ್ಟ್‌ನ ಅಧ್ಯಕ್ಷರಾದ ಶ್ರೀ ಪಿ.ಎಂ. ರುದ್ರೇಶ್ ಅವರ ನೇತೃತ್ವದಲ್ಲಿ ಎಲ್ಲಾ ಪದಾಧಿಕಾರಿಗಳು ಸೇವಾ ಮನೋಭಾವದಿಂದ ನಿಸ್ವಾರ್ಥದಿಂದ ಸೇವೆ ಸಲ್ಲಿಸಿದ ಕಾರಣ ಒಂದು ಸುಂದರ ದೇಗುಲ ಹಾಗೂ ನಂದಿ ಗೋಶಾಲೆ ನಿರ್ಮಾಣವಾಗಲು ಸಾಧ್ಯವಾಯಿತು. ಟ್ರಸ್ಟ್‌ನ ಎಲ್ಲಾ ಪದಾಧಿಕಾರಿಗಳೂ ಹಾಗೂ ಕಾರ್ಯಕ್ರಮ ಯಶಸ್ವಿಯಾಗಲು ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಸಹಕರಿಸಿದ ಎಲ್ಲರೂ ಅಭಿನಂದನಾರ್ಹರು. ■

ಬೀದರ್ ಜಿಲ್ಲೆ – ವರದಿ

# ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪುಣ್ಯಸ್ಮರಣೆ ಹಾಗೂ 'ಸಿದ್ಧಗಂಗಾಶ್ರೀ' ವೃತ್ತ ಲೋಕಾರ್ಪಣೆ

ಸಿದ್ಧಗಂಗಾ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಬೀದರ್ ಜಿಲ್ಲಾ ಘಟಕವು ಇತ್ತೀಚೆಗೆ ಭಾಲ್ಕಿ ತಾಲ್ಲೂಕಿನ ತೇಗಂಪೂರ ಗ್ರಾಮದಲ್ಲಿ ಪದ್ಮಭೂಷಣ, ಕರ್ನಾಟಕರತ್ನ, ತ್ರಿವಿಧ ದಾಸೋಹಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಸ್ಮರಣೆ ಹಾಗೂ ಗ್ರಾಮದ ವೃತ್ತಕ್ಕೆ 'ಸಿದ್ಧಗಂಗಾ ಶ್ರೀ' ಹೆಸರಿಡುವುದರ ಮೂಲಕ ಭಕ್ತಿ ನಮನವನ್ನು ಸಲ್ಲಿಸಿತು.

ಪುಣ್ಯಸ್ಮರಣೆ ಸಮಾರಂಭದಲ್ಲಿ ಮಾತನಾಡಿದ ಸಿದ್ಧಗಂಗಾ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಬೀದರ್ ಜಿಲ್ಲಾ ಘಟಕದ ಅಧ್ಯಕ್ಷರಾದ ಶ್ರೀ ಶಿವಕುಮಾರ ಪಾಟೀಲ್ ತೇಗಂಪೂರ ಅವರು ವೃತ್ತವನ್ನು ಉದ್ಘಾಟಿಸಿ ಮಾತನಾಡಿ 'ಬೀದರ್ ಜಿಲ್ಲೆಯ ಸಾವಿರಾರು ವಿದ್ಯಾರ್ಥಿಗಳು ಸಿದ್ಧಗಂಗಾ ಮಠದಲ್ಲಿ ಆಶ್ರಯಪಡೆದು ಪರಮಪೂಜ್ಯರ ದಿವ್ಯಾಶೀರ್ವಾದದ ಮುಂಬೆಳಕಿನಲ್ಲಿ ತಮ್ಮ ಭವಿಷ್ಯವನ್ನು ರೂಪಿಸಿಕೊಂಡು ಸುಸಂಸ್ಕೃತವಂತರಾಗಿದ್ದಾರೆ' ಎಂದು ತಿಳಿಸಿದರು. ಶ್ರೀ ಶಿವಲಿಂಗಸ್ವಾಮಿ ಅವರು ಮಾತನಾಡಿ ಪರಮಪೂಜ್ಯರ ಸೇವೆ ನಾಡಿಗಲ್ಲದೇ ದೇಶಕ್ಕೆ ಮಾದರಿ ಎಂದು ತಿಳಿಸಿದರು. ಶ್ರೀ ಮಾಣಿಕರಾವ್ ಪಾಟೀಲ್ ಅವರು ಅಧ್ಯಕ್ಷತೆ ವಹಿಸಿದ್ದರು. ಸಮಾರಂಭದಲ್ಲಿ ಶ್ರೀ ಗೋಪಾಲ ಬಿರಾದಾರ ಪಾಟೀಲ್, ಶ್ರೀ ಹಣಮಂತ ಹುಲೆಪ್ಪ, ಶ್ರೀ ನವನಾಥ ಪಾಟೀಲ್, ಶ್ರೀಮತಿ ಮನೆಬಾಯಿ, ಶ್ರೀಮತಿ ಪರಗಬಾಯಿ ಚೆನ್ನಪ್ಪ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ದಾನಿಗಳ ಪಟ್ಟಿ

ಶ್ರೀ ಸಿದ್ಧಗಂಗಾ ಮಠ, ತುಮಕೂರು

ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೨೬೩೦. | ಶ್ರೀ ಪುಟ್ಟಶಂಕರಯ್ಯ<br>ಬೆಂಗಳೂರು | ೧,೦೦೦ |
| ೨೬೩೧. | ಶ್ರೀಮತಿ ಕೆ. ಸಿದ್ಧಗಂಗಮ್ಮ ಮತ್ತು ಶ್ರೀ ಆರ್. ಶಿವಣ್ಣ<br>ಬೆಂಗಳೂರು | ೧,೦೦೦ |
| ೨೬೩೨. | ಶ್ರೀ ಆರ್. ಮಹದೇವಯ್ಯ<br>ಬೆಂಗಳೂರು | ೨,೦೦೦ |
| ೨೬೩೩. | ಶ್ರೀ ಎಸ್. ಶಂಕರಪ್ಪ<br>ತುಮಕೂರು | ೧,೦೦೦ |
| ೨೬೩೪. | ಶ್ರೀ ಕೆಂಪಹೊನ್ನಯ್ಯ<br>ಚಿಕ್ಕತೊಟ್ಲುಕೆರೆ | ೨,೦೨೦ |
| ೨೬೩೫. | ಶ್ರೀ ಆಂಜನಪ್ಪ ಸಿ.ಎನ್.<br>ಬೆಂಗಳೂರು | ೫೦೧ |
| ೨೬೩೬. | ಶ್ರೀ ಸಿ.ಎಂ. ರಂಗಣ್ಣ<br>ದೊಡ್ಡಬಳ್ಳಾಪುರ | ೨,೦೦೦ |
| ೨೬೩೭. | ಶ್ರೀ ಈಶ್ವರಪ್ಪ<br>ಶಿವರಾಜಪುರ | ೨,೦೦೦ |
| ೨೬೩೮. | ಶ್ರೀ ಹೆಚ್. ಗುರುಲಿಂಗಪ್ಪ<br>ಹಾಲನೂರು | ೧,೦೦೧ |
| ೨೬೩೯. | ಶ್ರೀ ಶಿವಶಂಕರ ಡಿ.ಎನ್.<br>ತುಮಕೂರು | ೪,೫೦೦ |
| ೨೬೪೦. | ಶ್ರೀ ಟಿ.ಎಸ್. ಸಿದ್ಧಲಿಂಗಪ್ಪ<br>ತುಮಕೂರು | ೧,೦೦೧ |
| ೨೬೪೧. | ಶ್ರೀಮತಿ ಶಿವಮ್ಮ<br>ಬೆಂಗಳೂರು | ೫,೦೦೧ |
| ೨೬೪೨. | ಶ್ರೀಮತಿ ಜಿ.ಪಿ. ಲಲಿತ<br>ಬೆಂಗಳೂರು | ೧,೦೦೧ |
| ೨೬೪೩. | ಶ್ರೀ ಮಲ್ಲೇಶಪ್ಪ ಎಸ್.ಎಂ.<br>ಹಾಸನ | ೨,೦೦೦ |
| ೨೬೪೪. | ಶ್ರೀಮತಿ ವಸುಂದರ ಜಿ.<br>ತಿಪಟೂರು | ೧,೦೦೦ |
| ೨೬೪೫. | ಶ್ರೀ ಕೆ.ಸಿ. ಚಿಕ್ಕಣ್ಣ<br>ಕೋಲಾರ | ೨,೦೦೧ |

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೨೬೪೬. | ಶ್ರೀ ಸೋಮಶೇಖರ<br>ಬೆಂಗಳೂರು | ೧೦,೦೦೦ |
| ೨೬೪೭. | ಶ್ರೀಮತಿ ಟಿ. ಸುವರ್ಣ<br>ಬೆಂಗಳೂರು | ೨೧,೦೦೦ |
| ೨೬೪೮. | ಶ್ರೀಮತಿ ಟಿ. ಪದ್ಮ<br>ಬೆಂಗಳೂರು | ೨೦,೦೦೦ |
| ೨೬೪೯. | ಶ್ರೀ ಕೆ.ಎಸ್. ಶಿವರುದ್ರಯ್ಯ<br>ಬೆಂಗಳೂರು | ೨,೦೦೬ |
| ೨೬೫೦. | ಶ್ರೀ ಕೆ.ಹೆಚ್. ಜಯರಾಮಪ್ಪ<br>ತುಮಕೂರು | ೧೯,೯೯೯ |
| ೨೬೫೧. | ಶ್ರೀ ಎಸ್. ಚನ್ನವೀರದೇವರು<br>ಬೆಂಗಳೂರು | ೧,೧೧೬ |
| ೨೬೫೨. | ಶ್ರೀ ಕೆ.ವಿ. ವೀರಣ್ಣ<br>ಬೆಂಗಳೂರು | ೧೦,೦೦೦ |
| ೨೬೫೩. | ಶ್ರೀ ಜಿ.ಬಿ. ಮೃತ್ಯುಂಜಯ<br>ಗೊಟ್ಟಿಪುರ | ೧೦,೦೦೦ |
| ೨೬೫೪. | ಶ್ರೀ ಬಿ.ಎಂ. ಗೌರಪ್ಪ<br>ಬೆಂಗಳೂರು | ೮೬,೦೦೦ |
| ೨೬೫೫. | ಶ್ರೀಮತಿ ಪಾರ್ವತಿ ಜಗದೀಶ್<br>ಬೆಂಗಳೂರು | ೧೦,೦೦೧ |
| ೨೬೫೬. | ಶ್ರೀ ಎಸ್.ಆರ್. ರೇಣುಕಾರಾಧ್ಯ<br>ಬೆಂಗಳೂರು | ೨,೦೦೦ |
| ೨೬೫೭. | ಶ್ರೀ ವೈ. ವೆಂಕಟೇಶ<br>ಬೆಂಗಳೂರು | ೧೦,೦೦೦ |
| ೨೬೫೮. | ಶ್ರೀ ಎಸ್. ಕುಮಾರ<br>ತುಮಕೂರು | ೨,೦೦೧ |
| ೨೬೫೯. | ಶ್ರೀ ಎಸ್.ವಿ. ರವೀಂದ್ರನಾಥ್ ಠಾಗೋರ್<br>ತುಮಕೂರು | ೩೦,೦೦೦ |
| ೨೬೬೦. | ಶ್ರೀ ವಿ.ಎನ್. ಶಿವಣ್ಣ<br>ಬೆಂಗಳೂರು | ೨,೦೦೦ |
| ೨೬೬೧. | ಶ್ರೀ ಜಿ.ಕೆ. ಪುಟ್ಟಲಿಂಗಪ್ಪ<br>ಮಧುಗಿರಿ | ೨,೦೦೦ |







| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೨೬೬೨. | ಶ್ರೀ ಕೆ.ಎಸ್. ರವಿಶಂಕರ ಬೆಂಗಳೂರು | ೪೨,೦೦೦ |
| ೨೬೬೩. | ಶ್ರೀ ಬಿ. ಜಯಣ್ಣ ಬೆಂಗಳೂರು | ೫,೦೦೨ |
| ೨೬೬೪. | ಶ್ರೀ ಸಿ.ಎಂ. ರಂಗಸ್ವಾಮಯ್ಯ ತುಮಕೂರು | ೨,೦೦೦ |
| ೨೬೬೫. | ಶ್ರೀ ಪಿ. ಗುರುಪಾದಸ್ವಾಮಿ ಹಸನೂರು | ೨,೦೦೦ |
| ೨೬೬೬. | ಶ್ರೀ ಆರ್.ಎಸ್. ಹುಚ್ಚಾಚಾರಿ ಬೆಂಗಳೂರು | ೨೫,೦೦೧ |
| ೨೬೬೭. | ಶ್ರೀ ಗಂಗಣ್ಣ ಬೆಂಗಳೂರು | ೧೦,೦೦೦ |
| ೨೬೬೮. | ಶ್ರೀ ಎಸ್.ಬಿ. ರಾಜಣ್ಣ ಬೆಂಗಳೂರು | ೧೧,೧೧೧ |
| ೨೬೬೯. | ಶ್ರೀಮತಿ ಉಮಾದೇವಿ ಬೆಂಗಳೂರು | ೩,೦೦೦ |
| ೨೬೭೦. | ಶ್ರೀ ಜಿ.ಕೆ. ನಾಗರಾಜು ಬೆಂಗಳೂರು | ೨,೦೦೦ |
| ೨೬೭೧. | ಶ್ರೀ ಮಹದೇವಸ್ವಾಮಿ ಗ್ರಾಮದೇವತಿಪುರ | ೧೦,೦೦೦ |
| ೨೬೭೨. | ಶ್ರೀ ಬಿ.ಆರ್. ರಂಗಸ್ವಾಮಯ್ಯ ಬೆಂಗಳೂರು | ೨,೦೦೦ |
| ೨೬೭೩. | ಶ್ರೀ ಎಂ.ಎ. ರಾಜಯ್ಯ ಮೈಸೂರು | ೫,೦೦೦ |
| ೨೬೭೪. | ಶ್ರೀ ವೀರಭದ್ರೇಗೌಡ ರಾಯಚೂರು | ೧,೦೦೦ |
| ೨೬೭೫. | ಶ್ರೀ ತಗಡೂರು ವೀರಭದ್ರಪ್ಪ ಬೆಂಗಳೂರು | ೨,೦೦೦ |
| ೨೬೭೬. | ಶ್ರೀ ಎಂ.ಆರ್. ಶಿವಣ್ಣ ಬೆಂಗಳೂರು | ೨,೦೦೧ |
| ೨೬೭೭. | ಶ್ರೀ ಬಿ.ವಿ. ಚಂದ್ರಶೇಖರಯ್ಯ ತುಮಕೂರು | ೧,೦೦೦ |
| ೨೬೭೮. | ಶ್ರೀ ಎಲ್. ಮಲ್ಲಿಕಾರ್ಜುನಯ್ಯ ತುಮಕೂರು | ೨,೦೦೦ |
| ೨೬೭೯. | ಶ್ರೀ ಆರ್. ಗೋವಿಂದಪ್ಪ ತುಮಕೂರು | ೨,೦೦೧ |
| ೨೬೮೦. | ಶ್ರೀ ಶಾಂತರಾಜು ಬಿ.ಸಿ. ಬೆಂಗಳೂರು | ೧,೦೦೦ |
| ೨೬೮೧. | ಶ್ರೀ ಎ.ಎಸ್. ನಾಗರಾಜಪ್ಪ ದಾವಣಗೆರೆ | ೧,೫೦೦ |

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೨೬೮೨. | ಶ್ರೀ ಎಸ್. ಮಂಜುನಾಥ ತುಮಕೂರು | ೫೦೦ |
| ೨೬೮೩. | ಶ್ರೀ ಕೆ.ಜಿ. ನಂಜುಂಡಪ್ಪ ಹಿಂದೂಪುರ | ೧೧,೧೧೧ |
| ೨೬೮೪. | ಶ್ರೀ ಮಲ್ಲಿಕಾರ್ಜುನ ತುಮಕೂರು | ೫೦೧ |
| ೨೬೮೫. | ಶ್ರೀ ಮಲ್ಲಿಕಾರ್ಜುನ ವಡೆಯರ್ ಬೆಟ್ಟದಹಲಸೂರು | ೨,೦೦೦ |
| ೨೬೮೬. | ಶ್ರೀ ರಾಜಪ್ಪ ಬಿ. ಹೊನ್ನಗಂಗಯ್ಯಪಾಳ್ಯ | ೫೦೦ |
| ೨೬೮೭. | ಶ್ರೀ ಆರ್. ದೊಡ್ಡಬಸಪ್ಪ ಕರೂರು | ೨,೦೦೨ |
| ೨೬೮೮. | ಶ್ರೀ ಗಿಣ್ಣಪ್ಪನವರ ಮಲ್ಲಪ್ಪ ಕರೂರು | ೧,೦೧೧ |
| ೨೬೮೯. | ಶ್ರೀ ಎಂ.ಜಿ. ಸಿದ್ಧರಾಮಯ್ಯ ತುಮಕೂರು | ೧,೦೦೦ |
| ೨೬೯೦. | ಶ್ರೀ ಟಿ.ಕೆ. ಶಿವಲಿಂಗಪ್ಪ ದಾವಣಗೆರೆ | ೨,೦೦೧ |
| ೨೬೯೧. | ಶ್ರೀ ಶಿವಣ್ಣ ಜಿ.ಸಿ. ರಾಮನಗರ | ೫೦೦ |
| ೨೬೯೨. | ಶ್ರೀ ಹೆಚ್.ಟಿ. ಲಿಂಗಪ್ಪ ಹಾಲನೂರು | ೧,೦೦೦ |
| ೨೬೯೩. | ಶ್ರೀ ಶಿವಣ್ಣ ತುಮಕೂರು | ೨,೦೦೧ |
| ೨೬೯೪. | ಶ್ರೀ ಎನ್. ಶಿವಣ್ಣ ನಾಗದೇವನಹಳ್ಳಿ | ೫೦೦ |
| ೨೬೯೫. | ಶ್ರೀ ಸಿ.ಎಸ್. ರಾಜಶೇಖರಯ್ಯ ಬೆಂಗಳೂರು | ೨,೦೦೧ |
| ೨೬೯೬. | ಶ್ರೀ ಎಂ.ಜಿ. ಶಿವಲಿಂಗಯ್ಯ ಮಂಚಿಹಳ್ಳಿ | ೨೨,೨೬೫ |
| ೨೬೯೭. | ಶ್ರೀ ಮೊಹಮ್ಮದ್ ಆರೀಫ್ ಶಿವಮೊಗ್ಗ | ೧,೦೦,೦೦೦ |
| ೨೬೯೮. | ಶ್ರೀಮತಿ ಕೆ.ಸಿ. ತನುಜಾ ಎಸ್.ಐ.ಟಿ. ತುಮಕೂರು | ೨೦,೦೦೦ |
| ೨೬೯೯. | ಶ್ರೀ ಮಧು ಸಿದ್ಧಗಂಗಾ ಪಾಲಿಟೆಕ್ನಿಕ್, ತುಮಕೂರು | ೩೫,೦೦೦ |
| ೨೭೦೦. | ಶ್ರೀಮತಿ ಜಿ.ಎಸ್. ಅನುಷಾ ಚಳ್ಳಕೆರೆ | ೧,೪೦೦ |

(ಮುಂದುವರೆಯುತ್ತದೆ)

"Siddaganga" Monthly - Postal Reg. No. L2/RNP/385/TMR/2018-20
Posted at RMS, Tumkur-572 102

RNI No. 17139/69



To

If undelivered please return to :
Editor
Siddaganga Monthly Magazine
Siddaganga Math
Tumkur-572 104

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bengaluru-10, Ph : 23404232

email ID : geetanjaligraphics@gmail.com